# ಸರ್ರಿಯಲಿಸಂ ಪಂಥ

(ಕರ್ನಾಟಕದ ಸರ್ರಿಯಲಿಸಂ ಪಂಥದ ಕಲಾಕೃತಿಗಳನ್ನು ಅನುಲಕ್ಷಿಸಿ
ಒಂದು ವಿಶ್ಲೇಷಣಾತ್ಮಕ ಅಧ್ಯಯನ)

(ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿದ ಸಂಶೋಧನ ಸಂ-ಪ್ರಬಂಧ)

ಸಂಶೋಧಕರು
ನೋಂ ಸಂಖ್ಯೆ : ೧೮೦೧೧೫೦೩೦೦೨೮



ಲಲಿತಕಲಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೧೯

# ಪರಿವಿಡಿ

ಅಧ್ಯಾಯನ : ಒಂದು

**ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು ವಿಧಾನ**

ಅಧ್ಯಾಯ : ಎರಡು

**ನವ್ಯಕಲಾ ಪಂಥಗಳ ಹುಟ್ಟು ಮತ್ತು ಬೆಳವಣಿಗೆ ಕರ್ನಾಟಕದ ಮೇಲಾದ ಪ್ರಭಾವ**

ಅಧ್ಯಾಯ : ಮೂರು

**ಕರ್ನಾಟಕದಲ್ಲಿ ಸರ್ರಿಯಲಿಸಂ ಪಂಥದ ಹುಟ್ಟು, ಬೆಳವಣಿಗೆ ಮತ್ತು ಲಕ್ಷಣಗಳು**

ಅಧ್ಯಾಯ : ನಾಲ್ಕು

**ಸರ್ರಿಯಲಿಸಂ ಪಂಥದ ಕಲಾಕೃತಿಗಳ ವಸ್ತುವಿಷಯ ಮತ್ತು ವರ್ಗೀಕರಣ**

೧. ಸಾಮಾಜಿಕ ಚಿತ್ರಗಳು
೨. ರಾಜಕೀಯ ಚಿತ್ರಗಳು
೩. ನೈಸರ್ಗಿಕ ಚಿತ್ರಗಳು
೪. ವೈಯಕ್ತಿಕ ಚಿತ್ರಗಳು

ಅಧ್ಯಾಯ : ಐದು

**ಸರ್ರಿಯಲಿಸಂ ಪಂಥದ ಕಲಾವಿದರ ಪರಿಚಯ**

ಅಧ್ಯಾಯ : ಆರು

**ಸಮಾರೋಪ**

**ಗ್ರಂಥಋಣ**

**ಅನುಬಂಧಗಳು :**

೧) ಸಂಕ್ಷೇಪಗಳು
೨) ಛಾಯಾಚಿತ್ರಗಳು
೩) ವಕ್ತೃ ವಿವರ

# ಅಧ್ಯಾಯ : ಒಂದು

೧.೧ ಅಧ್ಯಯನದ ಉದ್ದೇಶ

೧.೨ ವ್ಯಾಪ್ತಿ,

೧.೩ ಸ್ವರೂಪ

೧.೪ ವೈಧಾನಿಕತೆ

೧.೫ ಮಹತ್ವ

## ಅಧ್ಯಾಯ : ಒಂದು

## ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು ವೈಧಾನಿಕತೆ

**ಮಾ**ನವನ ಮೊದಲ ಭಾಷೆ ಚಿತ್ರವಾಗಿತ್ತು. ಅದನ್ನು ಚಿತ್ರಲಿಪಿ ಎಂದೆ ಪರಿಗಣಿಸಲಾಗಿದೆ. ಇತಿಹಾಸ ಪೂರ್ವಕಾಲದಿಂದ ಆಗು-ಹೋಗುಗಳನ್ನು ಗಮನಿಸಿದಾಗ ಚಿತ್ರವು ಈ ಮನುಷ್ಯ ಬದುಕಿನ ಜೀವಾಳವಾಗಿತ್ತು. ಸೃಷ್ಟಿಯ ಸ್ವರೂಪವು ವಿಸ್ಮಯವಾಗಿದ್ದು, ಅನೇಕ ಕುತೂಹಲಕರವಾದ ನಿಗೂಡವಾದ ಅರ್ಥಗಳನ್ನು ಹೊಂದಿದೆ. ಇಂತಹ ಸಂಗತಿಯನ್ನು ಅರ್ಥೈಸಿಕೊಳ್ಳಲು ಮಾನವ ಹಲವಾರು ಮಾರ್ಗಗಳಡಿಯಲ್ಲಿ ಸಾಗುತ್ತ ಬಂದಿದ್ದಾನೆ. ತನ್ನ ಜೀವಿತ ಅವಧಿಯಲ್ಲಿ ಬೌದ್ಧಿಕ ಹಾಗೂ ಭೌತಿಕ ಜಗತ್ತಿನೊಡನೆ ಹೊಂದಿಕೊಂಡು ಬದುಕಲು ತನ್ನದೆ ಆದ ನಾಗರೀಕ ಜೀವನವನ್ನು ಸೃಷ್ಟಿಸಿಕೊಂಡಿದ್ದು ವಿನೂತನ ಸಂಸ್ಕೃತಿಯಡಿ ಹೊಂದಾಣಿಕೆ ಮಾಡಿಕೊಂಡು ಬದುಕನ್ನು ಸಾಗಿಸುತ್ತಾ ಬಂದಿದ್ದಾನೆ. ಮಾನವನ ಜೀವಿತಾವಧಿಯಲ್ಲಿ ಕಂಡುಬರುವ ಅನುಭವ, ಭಾವಾಭಿವ್ಯಕ್ತಗಳಾದ ಸುಖ, ದುಃಖ-ದುಮ್ಮಾನಗಳನ್ನು ಅನೇಕ ರೂಪಗಳಲ್ಲಿ ಅಭಿವ್ಯಕ್ತಿಗೊಳಿಸುವ ಪ್ರಯತ್ನದಡಿಯಲ್ಲಿ ಸಂಸ್ಕೃತಿಯ ಭಾಗವಾದ, ತನಗರಿವಿಲ್ಲದೆ ಚಿತ್ರಕಲೆಯ ಮಾಧ್ಯಮವನ್ನು ಸೃಷ್ಟಿಸಿಕೊಳ್ಳುತ್ತಾ ಬಂದಿದ್ದಾನೆ. ಚಿತ್ರಕಲೆಯನ್ನು ವಿಶ್ವಭಾಷೆಯಾಗಿ ಬೆಳಕು ಕಂಡುಕೊಳ್ಳುವಂತೆ ಬೆಳೆಸುವುದರ ಜೊತೆಗೆ ಆಯಾ ಕಾಲದ ನಿತ್ಯದ ಬದುಕಿನ ಆಚಾರ-ವಿಚಾರ, ನಂಬಿಕೆ ಮತ್ತು ಧಾರ್ಮಿಕ ಕ್ರಿಯಾವಿಧಿಗಳಂತಹ ಸಂಗತಿಗಳನ್ನು ಚಿತ್ರ, ಶಿಲ್ಪ ಇತ್ಯಾದಿ ಲಲಿತಕಲೆಗಳಲ್ಲಿ ಒಡಮೂಡಿದೆ. ಇಂತಹ ಕಲೆಗಳನ್ನು ನಮ್ಮ ಭಾರತ ದೇಶದಲ್ಲಾಗಿರಬಹುದು, ಪಾಶ್ಚಾತ್ಯ ದೇಶದಲ್ಲಾಗಿರಬಹುದು, ಪೂರ್ವಾತ್ಯ ರಾಷ್ಟ್ರದಲ್ಲಾಗಿರಬಹುದು, ಪ್ರಪಂಚದ ಎಲ್ಲಾ ಜನಜೀವನ ಆರಂಭವಾಗಿದ್ದು ಸಂಜ್ಞಾ ಭಾಷೆಯ ಮೂಲಕ ಎಂದು ಹೇಳಬಹುದು. ಅಂದರೆ ಚಿತ್ರ ಸಂಕೇತದ ಮೂಲಕ ಇಲ್ಲಿ ಮಾನವ ತನ್ನ ದೈನಂದಿನ ಅನುಕೂಲತೆಗಳಿಗಾಗಿ ವ್ಯವಹರಿಸಲು ಮತ್ತೊಬ್ಬರೊಡನೆ ಕೂಡುಕೂಳ್ಳುವುದನ್ನು ಮಾಡುವ ಸಲುವಾಗಿ ಪ್ರಯತ್ನಿಸಿದ್ದನ್ನು. ಜಗತ್ತಿನ ಎಲ್ಲಾ ನಾಗರೀಕ ಇತಿಹಾಸಗಳಲ್ಲಿ ಕಾಣುತ್ತೇವೆ.

ಆದಿಮಾನವ ನಂತರ ಸಂಘಜೀವಿಯೂ, ತನ್ನ ಆಸೆ ಆಕಾಂಕ್ಷೆಗಳಲ್ಲಿ ಉತ್ಸುಕ, ನಾನು ನನ್ನದು ಎಂಬ ಸ್ವಾರ್ಥ ಭಾವನೆ ಕಲಿತನು. ತನ್ನ ಪ್ರತಿಭೆಯನ್ನು ಮತ್ತೊಬ್ಬರಿಗೆ ತೋರಿಸುವ

ಗುಣವನ್ನು ಬೆಳೆಸಿಕೊಂಡನು. ಆಗಲೆ ಜಗತ್ತಿನಲ್ಲಿ ಸಿಂಧೂ ಸಂಸ್ಕೃತಿ, ಮೆಸಪಟೋಮಿಯನ್ ಸಂಸ್ಕೃತಿ, ಇತರೆ ನಾಗರೀಕತೆಗಳು ಹುಟ್ಟಿಕೊಂಡು ತಮ್ಮ ಸಮಕಾಲೀನ ಜನಜೀವನದ ಸಂಗತಿಗಳು ಮೊಟ್ಟಮೊದಲಿಗೆ ಗೀಚಿ, ಕೊರೆದು, ಕುಟ್ಟಿ ಮಾಡಿದಂತಹ ಚಿತ್ರಗಳು ಕಲ್ಲು, ಬಂಡೆ, ಗೋಡೆಗಳ ಮಾಧ್ಯಮಗಳಿಂದ ಅಭಿವ್ಯಕ್ತಿಗೊಳಿಸಿ, ತಾವು ವಾಸಿಸುವ ನಿವಾಸಗಳಲ್ಲಿ ಒಳಗೆ–ಹೊರಗೆ ಸಿಕ್ಕಂತಹ ಸ್ಥಳವಕಾಶಗಳನ್ನು ತಮ್ಮ ಕಾಲದ ಸಂಗತಿಗಳನ್ನು ಹೇಳುವಂತಹ ಚಿತ್ರಗಳನ್ನು ಭಿತ್ತಿ ಚಿತ್ರಗಳ ಸ್ವರೂಪದಲ್ಲಿ, ಶಿಲ್ಪಗಳ ರೂಪದಲ್ಲಿ, ಮೂರ್ತಿ ಶಿಲ್ಪಗಳ ಸ್ವರೂಪದಲ್ಲಿ ಅಭಿವ್ಯಕ್ತಿಸಿದರು. ತಮ್ಮದೇ ಆದ ಧಾರ್ಮಿಕ ನಂಬಿಕೆಗಳನ್ನು ಹೊಂದಿದವರು. ತದನಂತರ ಲಿಪಿಗಳನ್ನು ಕಂಡುಕೊಂಡರು. ಈ ಕಲೆಯನ್ನು ವೈಶಿಷ್ಟ್ಯವಾಗಿ ಸ್ವತಂತ್ರವಾಗಿ ಬಳಸತೊಡಗಿದರು. ಮೊದಮೊದಲಿಗೆ ಪಾಳೆಯಗಾರರೂ, ಸಾಮಂತರು, ಸರದಾರರು, ನಂತರ ರಾಜರು, ಸಾಮ್ರಾಟರು ಬೆಳಕಿಗೆ ಬಂದರು. ಇವರೆಲ್ಲರೂ ತಮ್ಮ ಕಾಲಾವಧಿಯ ಸಂಗತಿಗಳನ್ನು ದಾಖಲಿಸಲು ಆಸಕ್ತಿಯುಳ್ಳ ಕಲಾವಿದರಿಗೆ ಪ್ರೋತ್ಸಾಹ ನೀಡಿದರು.

ಈ ರೀತಿಯಾಗಿ ಕಲೆಯಾಗಿ ಕಲೆಯ ಕುರಿತಾದ ಕಲೆಗಾರರು ಜನನವಾಯಿತೆಂದು ಹೇಳಬಹುದು, ಕಲೆ ಕ್ರಮೇಣವಾಗಿ ಬೆಳೆದು ಕಾಲಕಾಲಕ್ಕೆ ಬದಲಾವಣೆಯಾಗುತ್ತದೆ. ಚಿತ್ರಕಲೆ ತನ್ನದೆ ಆದ ಉನ್ನತ ಸ್ಥಿತಿಯನ್ನು ಮುಟ್ಟುವುದಕ್ಕೆ ಅನೇಕ ವರ್ಷಗಳೇ ಕಳೆದುಹೋಗುತ್ತದೆ. ಪಾರಂಪರಿಕವಾಗಿ ಬೆಳೆದು ಬಂದಿರಬಹುದು ಅಥವಾ ಆಯಾ ಪ್ರದೇಶದ ಮೇಲೆ ಪರಿಣಾಮಗಳಾಗಬಹುದು. ಹೀಗೆ ಈ ಹೊಸ ಪಂಥಗಳು ಹುಟ್ಟುವುದಕ್ಕೆ ಕಳೆದ ಶತಮಾನದ ಅಂತ್ಯದಲ್ಲಿ ಮೊದಲಿಗೆ ಫ್ರಾನ್ಸ್‌ನಲ್ಲಿ ನಂತರ ಯುರೋಪ್‌ನಲ್ಲಿ ಹೊಸ ಶಕೆಯೊಂದು ಪ್ರಾರಂಭವವಾಯಿತು. ಚಿತ್ರಕಲೆ ಕ್ರಮೇಣವಾಗಿ ಸುಧಾರಣೆಗೊಳ್ಳುತ್ತಾ ಬಂದಿರುವುದನ್ನು ನಾವು ಕಾಣುತ್ತೇವೆ, ಮುಂದೆ ಶತಮಾನದ ಕೊನೆಗೆ ಮೊದಲಿಗೆ ಇದ್ದ ಫ್ರಾನ್ಸ್ ಹಾಗೂ ಯುರೋಪ್‌ನಲ್ಲಿ ಹೊಸ ಶಕೆಯೊಂದು ಪ್ರಾರಂಭವಾಯಿತು. ಕಲಾವಿದರಿಗೆ ನೇರವಾಗಿ ಅವನು ಮನದ ಅಂತರಾಳದಲ್ಲಿದ್ದ ಭಾವನೆ ಕ್ಯಾನ್ವಾಸ್ ಮೇಲೆ ರಚಿಸಿದರು.

ಪುರಾತನ ಕಾಲದಿಂದಲೂ ರಚನೆಗೊಂಡ ಅನೇಕ ಕಲಾಕೃತಿಗಳ ಪ್ರಕಾರಗಳು ಮತ್ತು ಇಂದಿನ ಕಲಾವಿದರಿಗೆ ಉಪಯುಕ್ತವಾಗುತ್ತಿವೆ. ಅಲ್ಲದೆ ಚಿತ್ರಕಲಾಕೃತಿಗಳ ಮರುಬಳಕೆಯಿಂದ ಕಲಾವಿದರು ಮಾಡಿರುವಂತ ಶ್ರಮ ಚಿತ್ರದಲ್ಲಿ ಕಾಣುತ್ತೇವೆ. ಚಿತ್ರಕಲೆ ಅಳಿಯಬಹುದಾದ ಕಾಲದಲ್ಲಿ ಕಲೆಯನ್ನು ಶುದ್ಧ ಕಲೆಯಾಗಿ, ದೃಶ್ಯ ಮಾಧ್ಯಮವಾಗಿ ಉಳಿಸಿಕೊಳ್ಳುವ ಪ್ರಯತ್ನ ಹೊಸ ಪಂಥದಿಂದ ತಿಳಿದುಕೊಳ್ಳುತ್ತೇವೆ.

ಇಂತಹ ಕಲೆಯ ಚರಿತ್ರೆಯನ್ನು ಗಮನಿಸಿದಾಗ ಕಾಲಕಾಲಕ್ಕೆ ಹಲವಾರು ಬದಲಾವಣೆಗಳು, ಸುಧಾರಣೆಗಳು ಕಂಡುಬರುತ್ತವೆ. ಚಿತ್ರಕಲೆಯು ಕೈ ಬರಹದಂತೆ ವೈಯಕ್ತಿಕ ವಿಷಯವಾಗಿದ್ದು ಕಲಾವಿದನಿಂದ ಕಲಾವಿದನಿಗೆ ಕೈಯಲ್ಲಿ ವ್ಯತ್ಯಾಸವಾಗುವುದುಂಟು ಅಥವಾ ಒಬ್ಬ ಪ್ರಸಿದ್ದ ಕಲಾವಿದನ

ಶೈಲಿಗೆ ಬೇಡಿಕೆ ಅಥವಾ ಮನ್ನಣೆಗಳಿದ್ದು ಜನಪ್ರಿಯವಾದರೆ ಉಳಿದವರು ಮತ್ತು ಆತನ ಶಿಷ್ಯರು ಪ್ರಯತ್ನ ಪೂರ್ವಕವಾಗಿಯೇ ಆ ಶೈಲಿಯನ್ನು ಅಭ್ಯಸಿಸಿ ಅದೆ ಒಂದು ಪರಂಪರೆಯಾಗುವಂತೆ ಮಾಡುವುದುಂಟು. ಒಂದು ಪ್ರದೇಶದ ಪಾರಂಪರಿಕ ಕಲೆ ಇನ್ನೊಂದು ಪ್ರದೇಶದ ಮೇಲೆ ಪರಿಣಾಮ ಬೀರಿದಾಗ ಹಲವಾರು ಬದಲಾವಣೆಗಳಾಗಬಹುದು. ಚಿತ್ರಕಲೆಗಾಗಿ ಬಳಸುವ ಉಪಕರಣಗಳಲ್ಲಿ ವೈಜ್ಞಾನಿಕ ಅನ್ವೇಷಣೆಗಳು ಸಾಮಾಜಿಕವಾಗಿ ಬಳಕೆಗೆ ಬಂದ ಕಾರಣದಿಂದಾಗಲೀ ಚಿತ್ರಕಲೆಯಲ್ಲಿ ಕೆಲವು ಹೊಸತನ ಕಂಡಬರುತ್ತವೆ.

## ಅಧ್ಯಯನದ ಉದ್ದೇಶ

ನವ್ಯ ಕಲಾಪ್ರಕಾರಗಳಲ್ಲಿ ಒಂದಾದ ಸರ್ರಿಯಲಿಸಂ ಪಂಥದ ಈ ಅಧ್ಯಯನವನ್ನು ಮುಖ್ಯವಾಗಿ ಈ ಕೆಳಗಿನ ಉದ್ದೇಶಗಳ ಹಿನ್ನೆಲೆಯಲ್ಲಿ ಅಧ್ಯಯನ ಮಾಡಲಾಗಿದೆ.

ಅಧ್ಯಯನ ಮಾಡಲು ಮೂಲ ಸ್ಫೂರ್ತಿಯೆಂದರೆ ನಾನು ಒಬ್ಬ ಕಲಾವಿದೆಯಾಗಿರುವುದರಿಂದ ನನ್ನ ಪದವಿ ಹಂತದಿಂದಲೂ ನಾನು ಕಲಾಕೃತಿ ರಚಿಸುತ್ತಾ ಬಂದಿರುವಾಗ ನನ್ನ ಅಧ್ಯಯನದ ಸಂದರ್ಭದಲ್ಲಿ ಅನೇಕ ವಿಷಯಗಳು ಇದ್ದವು. ಆದರೆ ಅತ್ಯಂತ ಆಕರ್ಷಣೀಯವಾದ ಅನೇಕ ಅಂಶಗಳಲ್ಲಿ ಈ ಸರ್ರಿಯಲಿಸಂ ಪಂಥ ನನಗೆ ಅರಿವಿಲ್ಲದೆ ನನ್ನ ಕಲಾಕೃತಿಗಳಲ್ಲಿ ಮೂಡಲು ಆರಂಭವಾದವು ನಂತರ ಅದನ್ನೇ ಮುಂದುವರೆಸಿದೆ. ಸ್ನಾತಕೋತ್ತರ ಪದವಿಯಲ್ಲಿ ಸಂಪೂರ್ಣವಾಗಿ ಸರ್ರಿಯಲಿಸಂ ಅಂಶಗಳೆ ನನ್ನ ಕಲಾಕೃತಿಗಳಲ್ಲಿ ಕಾಣತೊಡಗಿದವು. ಅದರಲ್ಲೆ ಆಸಕ್ತಿ ಇದ್ದ ಕಾರಣ ನಾನು ಹೆಚ್ಚಿನ ಅಧ್ಯಯನ ಮಾಡಿದೆ. ಈಗ ಸಂಶೋಧನ ಪ್ರಬಂಧ ಬರೆಯುವ ಸಂದರ್ಭ ಬಂದಾಗ ನಾನು ಪ್ರಯೋಗಿಕವಾಗಿ ಕಲಾಕೃತಿಗಳನ್ನು ರಚಿಸಿದರು ಕೂಡಾ ಸೈದ್ಧಾಂತಿಕವಾಗಿಯೂ ನನಗೆ ಇನ್ನೂ ಹೆಚ್ಚಿನ ವಿಷಯ ತಿಳಿದುಕೂಳ್ಳಲು ಸಹಾಯವಾಗುತ್ತದೆ ಎನ್ನುವ ಮೂಲ ಉದ್ದೇಶದಿಂದ ಈ ಅಧ್ಯಯನವನ್ನು ಮಾಡಲಾಗುವುದು.

ಅಳಿವಿನ ಅಂಚಿನಲ್ಲಿರುವ ಈ ಪಂಥದ ಕಲೆಯ ಚಾರಿತ್ರಿಕ ನೆಲೆ-ಹಿನ್ನೆಲೆಯನ್ನು ಮತ್ತು ಈ ಪಂಥ ಬೆಳೆದು ಬಂದ ಐತಿಹಾಸಿಕ ನೋಟವನ್ನು ತಿಳಿಯುವುದು ಈ ಅಧ್ಯಯನದ ಉದ್ದೇಶವಾಗಿದೆ. ಇದುವರೆಗು ಯಾವುದೆ ಪಂಥಗಳ ಕುರಿತು ಸಂಶೋಧನಾತ್ಮಕವಾಗಿ ಅಧ್ಯಯನಗಳು ನಡೆಯದೆ ಇರುವುದರಿಂದ ಈ ಒಂದು ಅಧ್ಯಯನವನ್ನು ಕೈಗೊಳ್ಳಲಾಗಿದೆ.

ಮೂಲತಃ ಭಾರತದಲ್ಲೆ ಮೊದಲು ಕಂಡು ಬಂದಿದ್ದರೂ ಸಹ ಪಾಶ್ಚಾತ್ಯ ದೇಶದಲ್ಲಿ ಪ್ರಾರಂಭವಾದ ಈ ಕಲಾ ಪಂಥವನ್ನು ಪ್ರಾರಂಭಿಸಿ ವಿಶೇಷವಾಗಿ ಕಲೆಯ ಬೆಳವಣಿಗೆಯ ಹಿನ್ನೆಲೆಯನ್ನು ಇಲ್ಲಿ ಅಧ್ಯಯನ ಮಾಡುವ ಪ್ರಮುಖ ಉದ್ದೇಶವನ್ನು ಹೊಂದಲಾಗಿದೆ.
ಕರ್ನಾಟಕದ ಕಲಾವಿದರಿಂದ ಅರಳುವ ವೈವಿಧ್ಯಮಯವಾದ ಸರ್ರಿಯಲಿಸಂ ಪಂಥದ ಕಲಾಕೃತಿಗಳ ವಸ್ತುವಿಷಯದ ಕುರಿತು ವಿಶೇಷವಾಗಿ ಅಧ್ಯಯನ ಮಾಡಲಾಗುತ್ತದೆ. ಉದ್ದೇಶವನ್ನು ಹೊಂದಲಾಗಿದೆ.

ಕರ್ನಾಟಕದ ಕಲಾವಿದರ ಮೇಲೆ ಸರ್ರಿಯಲಿಸಂ ಪಂಥ ಬೀರಿದ ಪ್ರಭಾವ ಪ್ರೇರಣೆ, ಶೈಲಿ, ತಂತ್ರಗಾರಿಕೆಗಳನ್ನು ಕುರಿತು ವಿಶೇಷವಾಗಿ ಹಾಗೂ ಪಾಶ್ಚಾತ್ಯರ ಕಲೆಗಳ ಪ್ರಭಾವ ಪ್ರೇರಣೆಗಳನ್ನು ಸಹ ಪ್ರಾಸಂಗಿಕವಾಗಿ ಅಧ್ಯಯನ ಮಾಡುವ ಉದ್ದೇಶ ಹೊಂದಿದೆ.

ಮುಂದಿನ ಪೀಳಿಗೆಗೆ ಸರ್ರಿಯಲಿಸಂ ಪಂಥದ ಕಲೆಯನ್ನು ಅದರ ಸಾಂಸ್ಕೃತಿಕ ಅನನ್ಯತೆಯನ್ನು ದಾಖಲೀಕರಣಗೊಳಿಸುವ ಮತ್ತು ಈ ಪರಂಪರೆಯನ್ನು ಮುಂದುವರೆಸಿಕೊಂಡು ಹೋಗುವ ಕುರಿತು ಹೀಗೆ ಹಲವು ಉದ್ದೇಶಗಳ ಹಿನ್ನೆಲೆಯಲ್ಲಿ ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ಕಾಲಕಾಲಕ್ಕೆ ಈ ಸರ್ರಿಯಲಿಸಂ ಪಂಥ ತನ್ನ ತಾಂತ್ರಿಕ ಸ್ವರೂಪವನ್ನು ಬದಲಿಸಿಕೊಳ್ಳುತ್ತ ಕಾಲಾನಂತರದಲ್ಲಿ ಕ್ರಮೇಣ ಅದು ತನ್ನ ಮೂಲವನ್ನೆ ಮರೆತುಬಿಡುವ ಸಾಧ್ಯತೆಗಳನ್ನು ಅಲ್ಲಗೆಳೆಯುವಂತಿಲ್ಲ. ಈ ಹಿನ್ನೆಲೆಯಲ್ಲಿ ಸರ್ರಿಯಲಿಸಂ ಕಲೆಯ ವಸ್ತುವಿಷಯಗಳನ್ನು ಒಂದಡೆ ಕಲೆ ಹಾಕುವುದರ ಅವಶ್ಯಕತೆ ಈ ದಿನಗಳಲ್ಲಿ ಮುಖ್ಯವಾಗಿರುವಂತದು. ಸರ್ರಿಯಲಿಸಂ ಕಲಾವಿದರ ಕಲಾಕೃತಿಯಲ್ಲಿ ಬಳಸುವ ನವೀನ ಉಪಕರಣ, ತಂತ್ರಗಾರಿಕೆಗಳ ವಿಷಯಗಳನ್ನು ಕುರಿತು ವಿಭಿನ್ನ ಅಂಶಗಳ ಕುರಿತು ಈ ಸಂಪ್ರಬಂಧ ಬೆಳಕು ಚೆಲ್ಲುವ ದಿಸೆಯಲ್ಲಿ ಅಧ್ಯಯನ ರೂಪುಗೊಂಡಿದೆ.

ದೃಶ್ಯಕಲಾ ಕ್ಷೇತ್ರದಲ್ಲಿ ಇದರ ಅರಿವಿನ ಅಗತ್ಯ ಹಾಗೂ ಮುಂದಿನ ದೃಶ್ಯಕಲಾ ಶಿಕ್ಷಣಕ್ಕೆ ಇಂತಹ ಕಲೆಯ ಪರಿಚಯ ಹೆಚ್ಚಿಸಿಕೊಳ್ಳಲು ಹಾಗೂ ಕಲೆಯ ವಿದ್ಯಾರ್ಥಿಗಳಿಗೆ, ವಿದ್ವಾಂಸರಿಗೆ, ಹಿರಿಯ ಕಲಾವಿದರಿಗೆ ಹಾಗೂ ಕಲಾಪೋಷಕರಿಗೆ, ಸಹೃದಯರಿಗೆ ತಿಳಿಸುವ ಮತ್ತು ಕಲಾ ಇತಿಹಾಸದಲ್ಲಿ ಸರ್ರಿಯಲಿಸಂ ಪಂಥದ ಮಹತ್ವವನ್ನು ದಾಖಲಿಸುವ ನಿಟ್ಟಿನಲ್ಲಿ ಈ ಅಧ್ಯಯನ ಒಂದು ಚಿಕ್ಕ ಪ್ರಯತ್ನವಾಗಿದೆ.

## ಅಧ್ಯಯನದ ಸ್ವರೂಪ.

ಸಂಶೋಧನೆ ಎನ್ನುವುದು ಬಹಳ ಹಿಂದಿನಿಂದಲು ನಡೆದು ಬಂದಿದ್ದು. ಅದು ದೃಶ್ಯಕಲೆಯಲ್ಲಿ ತನ್ನದೇ ಆದ ಸ್ವರೂಪ ಪಡೆದು ಎಂ.ಫಿಲ್ ಪದವಿ ಪ್ರಾಪ್ತಿಗಾಗಿ ಬಳಕೆಯಾಗಿರುವುದು ತೀರ ಕಡಿಮೆ ಎಂದು ಹೇಳಬಹುದು ಆದರೆ ಸಂಶೋಧನೆಗೆ ಸಂವಾದಿಯಾಗಿ ವಿಶ್ವವಿದ್ಯಾಲಯಗಳಲ್ಲಿ ಶೈಕ್ಷಣಿಕ ಶಿಸ್ತಿನ ರೂಪದಲ್ಲಿ ಬೆಳೆದು ಬಂದಿದೆ. ಸಂಶೋಧನೆ ಎಂಬುದು "ಅಲ್ಪವಿರಾಮದಿಂದ ಅರ್ಧವಿರಾಮ, ಅರ್ಧವಿರಾಮದಿಂದ ಪೂರ್ಣವಿರಾಮದೆಡೆಗೆ ಸಾಗುವ ಪಥ" ಎಂದು ಎಂ.ಎಂ.ಕಲಬುರ್ಗಿಯವರು ಕೊಡುವ ವ್ಯಾಖ್ಯಾವಾಗಿದೆ. ಸಂಶೋಧನಾ ಪಥದಲ್ಲಿ ಸಾಗುವುದು ಸಾಧ್ಯವಾಗದ ಮಾತು. ಏಕೆಂದರೆ ಅದಕ್ಕೆ ಕೊನೆ ಎಂಬುದಿಲ್ಲ. ಆದುದರಿಂದ ನನ್ನ ಸಂ–ಪ್ರಬಂಧನೆಗೆ ದೊರೆತ ಸರ್ರಿಯಲಿಸಂ ಪಂಥ (ಕರ್ನಾಟಕದ ಕಲಾಕೃತಿಗಳನ್ನು ಅನುಲಕ್ಷಿಸಿ) ಎನ್ನುವುದು. ಒಟ್ಟೊಟ್ಟಾಗಿದ್ದು ಅವುಗಳನ್ನು ಬೇರ್ಪಡಿಸಿಕೂಳ್ಳುವುದು ಸಂಶೋಧನೆಗೆ ಅತ್ಯಾವಶ್ಯಕವಾದದು. ಆದುದರಿಂದ ಇದನ್ನು ಸುಲಭವಾಗುವ ರೀತಿಯಲ್ಲಿ ಅಧ್ಯಯನದ ರೂಪದಲ್ಲಿ ವಿಂಗಡಿಸಿಕೊಂಡು ತನ್ನದೇಯಾದ ಅಧ್ಯಯ ಸ್ವರೂಪವನ್ನು ಐದು ಅಧ್ಯಾಯಗಳಾಗಿ ರೂಪಿಸಿಕೂಳ್ಳಲಾಗಿದೆ.

ಸಂಕ್ಷಿಪ್ತ ವಿವರವನ್ನು ಇಲ್ಲಿ ನೀಡಲಾಗಿದೆ.

ಮೊದಲನೆಯ ಅಧ್ಯಯವು ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ, ವೈಧಾನಿಕತೆಯಾಗಿದ್ದು ಪ್ರಸ್ತುತ ಅಧ್ಯಯನದ ಪೀಠಿಕೆಯೊಂದಿಗೆ ಅಧ್ಯಯನದ ಪ್ರಸ್ಥಾವನೆಯಲ್ಲಿ ಆದಿಮಾನನಿಂದ ಹಿಡಿದು ಇಂದಿನ ವರೆಗಿನ ಕಲೆಯ ಕುರಿತು ಸಂಕ್ಷೀಪ್ತ ಮಾತುಗಳು. ಅಧ್ಯಯನ ಕೈಗೊಳ್ಳುವ ನನ್ನ ಮೂಲ ಉದ್ದೇಶಗಳು ತಿಲಿಸಲಾಗುವುದು. ಅಧ್ಯಾಯ ಯಾವ ರೀತಿಯ ವಿಧಾನಗಳಲ್ಲಿ ಕೈಗೊಳ್ಳಲಾಗುತ್ತಿದೆ ಎಂದು ವಿವರಿಸಲಾಗಿದೆ.

ಎರಡನೆಯ ಅಧ್ಯಾಯವು ನವ್ಯಕಲಾ ಪಂಥಗಳು ಹುಟ್ಟು ಮತ್ತು ಬೆಳವಣಿಗೆ ಕರ್ನಾಟಕದ ಮೇಲಾದ ಪ್ರಾಭಾವವಾಗಿದ್ದು ಈ ಅಧ್ಯಯದಲ್ಲಿ ನವ್ಯಕಲೆ ಎಂದರೇನು, ನವ್ಯಕಲೆ ಹುಟ್ಟಲು ಕಾರಣವೇನು, ಹಲವು ಕಲಾ ಪಂಥಗಳ ಸಂಕ್ಷೀಪ್ತ ಪರಿಚಯ ಸಾಂಧರ್ಬಿಕವಾಗಿ ಪಾಶ್ಚಾತ್ಯ ಕಲಾವಿದರ ಹೆಸರುಗಳು ಮತ್ತು ಕರ್ನಾಟಕದ ಮೇಲೆ ನವ್ಯಕಲೆಯ ಪ್ರಭಾವ ಯಾವ ರೀತಿ ಆಯಿತು. ಕರ್ನಾಟಕದಲ್ಲಿ ಆದ ಬದಲಾವಣೆಗಳ ಬಗ್ಗೆ ಸ್ಥೂಲವಾಗಿ ಅಧ್ಯಯನ ಮಾಡಲಾಗಿದೆ. ಮೂರನೇಯ ಅಧ್ಯಯವು ಸರ್‍ರಿಯಲಿಸಂ ಪಂಥದ ಹುಟ್ಟು, ಬೆಳವಣಿಗೆ ಮತ್ತು ಲಕ್ಷಣಗಳು. ಇದರಲ್ಲಿ ಸರ್‍ರಿಯಲಿಸಂ ಪಂಥದ ಅರ್ಥ ಸ್ವರೂಪ ಅದರ ಹುಟ್ಟಿಗೆ ಕಾರಣ ಮತ್ತು ಪಾಶ್ಚಾತ್ಯ ದೇಶದಲ್ಲಿ ಹೇಗೆ ಬೇಳೆದು ಬಂತು ಎಂದು ಹೇಳುವದರ ಜೊತೆಗೆ ಭಾರತದಲ್ಲಿ ಹೇಗೆ ಪ್ರವೇಶ ಪಡೆಯಿತು ಮುಂದೆ ಕರ್ನಾಟಕದಲ್ಲಿ ಪ್ರಾರಂಭವಾದ ರೀತಿಯನ್ನು ವಿವರಿಸಿ ಮತ್ತು ಸರ್‍ರಿಯಲಿಸಂ ಚಿತ್ರಕಲೆಯ ಲಕ್ಷಣಗಳನ್ನು ಪಟ್ಟಿಮಾಡಲಾಗುವುದು.

ನಾಲ್ಕನೆಯ ಅಧ್ಯಾಯದಲ್ಲಿ ಸರ್‍ರಿಯಲಿಸಂ ಪಂಥದ ಕಲಾಕೃತಿಗಳ ವಸ್ತುವಿಷಯ ಮತ್ತು ವರ್ಗೀಕರಣ ಮಾಡಲಾಗಿದೆ. ಕರ್ನಾಟಕದ ಕಲಾವಿದರ ಕಲಾಕೃತಿಗಳನ್ನು ಸಾಮಾಜಿಕ, ರಾಜಕೀಯ, ನೈಸರ್ಗಿಕ, ವೈಯಕ್ತಿಕ, ಹೀಗೆ ನಾಲ್ಕು ರೀತಿಯಲ್ಲಿ ವರ್ಗೀಕರಿಸಿ ವಸ್ತುಗಳ ಜೋಡನೆಯನ್ನು ವಿಶ್ಲೇಷಣೆ ಮಾಡಲಾಗುವುದು.

ಐದನೆಯ ಅಧ್ಯಾಯದಲ್ಲಿ ಕರ್ನಾಟಕದ ಸರ್‍ರಿಯಲಿಸಂ ಪಂಥಕ್ಕೆ ಕುರಿತು ಕೆಲಸ ಮಾಡಿದ ಕಲಾವಿದರ ಗೌರವಿಸುವ ಹಿನ್ನೆಲೆಯಲ್ಲಿ ಸಂಕ್ಷಿಪ್ತ ಪರಿಚಯ ಮಾಡಲಾಗಿದೆ ಹಾಗೂ ಕಲಾವಿದರನ್ನು ಸಂದರ್ಶನ ಮಾಡುವ ಮೂಲಕ ವಿಶ್ಲೇಷಣೆಗೆ ಒಳಪಡಿಸಲಾಗುವುದು.

ಆರನೆಯ ಅಧ್ಯಾಯವು ಸಮಾರೋಪವಾಗಿದ್ದು ಇದರಲ್ಲಿ ಸರ್‍ರಿಯಲಿಸಂ ಪಂಥದ ಪ್ರಮುಖ್ಯತೆಯ ಬಗ್ಗೆ ಪ್ರತಿ ಅಧ್ಯಾಯವಾರು ಅದರ ಫಲಿತಗಳನ್ನು ವಿವರಿಸಲಾಗಿದೆ. ತಿಳಿಸುತ್ತಾ ಅಧ್ಯಾಯಗಳ ಸಮಾರೂಪ ಮಾಡಲಾಗುವುದು. ಈ ಅಧ್ಯಯನದಿಂದ ಕಂಡುಕೊಂಡ ಪ್ರಮುಖ ಫಲಿತಗಳನ್ನು ಕುರಿತಾದ ಸಮೀಕ್ಷೆಯನ್ನು ವಿವರಿಸಲಾಗುವುದು.

## ವ್ಯಾಪ್ತಿ

ಪ್ರಸ್ತುತ ಅಧ್ಯಯನವು ಕರ್ನಾಟಕದ 'ಸರ್‍ರಿಯಾಲಿಸಂ ಪಂಥ'ದ ಕಲಾಕೃತಿಗಳು ಎಂಬ ವಿಷಯಕ್ಕೆ ಕುರಿತದ್ದಾಗಿದ್ದು. ಇದು ಒಂದು ವಿಸ್ತಾರವಾದ ವಿಷಯವಾಗಿದ್ದು, ಈ ಕಲಾ ಕ್ಷೇತ್ರದಲ್ಲಿ ಕೃಷಿ ಮಾಡಿದ ಕಲಾವಿದರ ಸಂಖ್ಯೆ ಬಹಳ ಕಡಿಮೆ ಇರುವುದರಿಂದ ಅವರ ಕೆಲವು ಕಲಾಕೃತಿಗಳನ್ನು ಅನುಲಕ್ಷಿಸಿ ಅಧ್ಯಯನವನ್ನು ಕೈಗೊಳಲಾಗಿದೆ. ಕಲಾವಿದರ ಪರಿಚಯಕ್ಕಿಂತಲೂ ಕಲಾಕೃತಿಗಳಿಗೆ ಹೆಚ್ಚು ಒತ್ತು ನೀಡಲಾಗಿದೆ. ಹಾಗೂ ಸರ್‍ರಿಯಲಿಸಂ ಪಂಥಕ್ಕೆ ಸಂಬಂಧಿಸಿದ ಲೇಖನಗಳು, ಸಂಕಲನಗಳು, ಪುಸ್ತಕಗಳನ್ನು ಮತ್ತು ಹಿರಿಯ ಕಲಾವಿದರನ್ನು ಸಂದರ್ಶಿಸುವುದರ ಮೂಲಕ ಮಾಹಿತಿಯನ್ನು ಸಂಗ್ರಹಿಸಿ ವ್ಯಾಪ್ತಿಯನ್ನು ರೂಪಿಸಿಕೊಳ್ಳಲಾಗಿದೆ.

## ಅಧ್ಯಯನದ ವಿಧಾನ

ಈ ಸಂಶೋಧನ ಸಂಪ್ರಬಂಧವನ್ನು ರಚನೆ ಮಾಡಲು ಮುಖ್ಯವಾಗಿ ಎರಡು ರೀತಿ ಆಕರ ಸಾಮಗ್ರಿಗಳನ್ನು ಬಳಸಿಕೊಳ್ಳಲಾಗಿದೆ.

೧) ಮೂಲ ಆಕರ ಸಾಮಗ್ರಿ ೨) ಅನುಷಂಗಿಕ ಆಕರ ಸಾಮಗ್ರಿ

### ೧) ಮೂಲ ಆಕರ ಸಾಮಗ್ರಿ

ಮೂಲ ಆಕರ ಸಾಮಗ್ರಿಗಳಲ್ಲಿ ಮುಖ್ಯವಾದುದ್ದು ಕ್ಷೇತ್ರಕಾರ್ಯ. ಪ್ರಸ್ತುತ ಅಧ್ಯಾಯದಲ್ಲಿ ಕ್ಷೇತ್ರಕಾರ್ಯ ಅತ್ಯಂತ ಮಹತ್ವ ಪೂರ್ಣವಾಗಿದ್ದು. ಕ್ಷೇತ್ರಕಾರ್ಯವಿಲ್ಲದೆ ಸರ್‍ರಿಯಲಿಸಂ ಕಲೆಯ ಕಲಾಕೃತಿಗಳನ್ನು ಅಧ್ಯಯನ ಮಾಡಲು ಸಾಧ್ಯವಿಲ್ಲದ ಹಿನ್ನೆಲೆಯಲ್ಲಿ ಅದರ ನೆಲೆ-ಹಿನ್ನೆಲೆಯನ್ನು ತಿಳಿಯಲು ಈ ಕೆಳಗಿನ ಕಾರ್ಯವನ್ನು ನಡೆಸಲಾಗಿದೆ.

* ಸಂದರ್ಶನ
* ಛಾಯಾಚಿತ್ರಣ
* ಸಂದರ್ಶನ

ಸರ್‍ರಿಯಲಿಸಂ ಪಂಥದ ಕಲಾಕೃತಿ ರಚಿಸುವ ಕಲಾವಿದರು ಇರುವ ಪ್ರದೇಶಗಳಿಗೆ ಹೋಗಿ ಅಲ್ಲಿನ ಕಲಾವಿದರ ಕಲಾಕೃತಿಗಳ ಬಗ್ಗೆ ಸಂದರ್ಶನ ನಡೆಸಲಾಗಿದೆ. ಅವರ ವಿಚಾರಗಳನ್ನು ಧ್ವನಿಗ್ರಹಣ ಮಾಡಿಕೊಂಡು ಮತ್ತು ಕಲಾಕೃತಿಗಳಿಗೆ ಸಂಬಂಧಿಸಿದ ಪ್ರಶ್ನಾವಳಿ ಸಿದ್ದಪಡಿಸಿಕೊಂಡು ಸಂದರ್ಶನ ಮಾಡಿ, ಕಲೆಹಾಕಿರುವ ಮಾಹಿತಿಗಳನ್ನು ಸಂಶೋಧನೆಗೆ ಬಳಸಿಕೊಳ್ಳಲಾಗಿದೆ. ನಂತರ ಕಲಾತಜ್ಞರೊಂದಿಗೆ ಚರ್ಚಿಸಿ ಅಧ್ಯಯನಕ್ಕೆ ಪೂರಕವಾದ ಮಾಹಿತಯನ್ನು ಸಂಗ್ರಹಿಸಿ ಬಳಸಿಕೊಳ್ಳಲಾಗಿದೆ.

*** ಛಾಯಾಚಿತ್ರಣ**

ಸರ್‍ರಿಯಲಿಸಂ ಪಂಥದ ಕಲಾವಿದರ ಕಲಾಕೃತಿಗಳ ಛಾಯಾಚಿತ್ರಣವನ್ನು ಇರುವ ನೆಲೆಯಲ್ಲಿ ಹೋಗಿ ನೇರವಾಗಿ ಆಕರಗಳನ್ನು ಕ್ಷೇತ್ರಕಾರ್ಯನಡೆಸಿ ಸಂಗ್ರಹಿಸಲಾಗಿದೆ. ಮೂಲ ಆಕರಗಳನ್ನು

ಇಟ್ಟುಕೊಂಡು ಸಂಶೋಧನ ವಿಷಯಕ್ಕೆ ಅಗತ್ಯವಾದುದ್ದನ್ನು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಅಂತರ್‌ಜಾಲ ತಾಣಗಳಿಂದ ವಿಷಯವನ್ನು ಸಂಗ್ರಹಿಸಲಾಗಿದೆ.

**೨ ಅನುಷಂಗಿಕ ಆಕರ ಸಾಮಗ್ರಿ**

ಸರ್ರಿಯಲಿಸಂ ಪಂಥದ ಕಲೆಯ ಕುರಿತಾಗಿ ಬಂದಿರುವ ಪ್ರಕಟಿತ-ಅಪ್ರಕಟಿತ ಸಾಹಿತ್ಯ ಕೃತಿಗಳು, ಪಿ.ಹೆಚ್.ಡಿ ಮಹಾಪ್ರಬಂಧಗಳು, ಪುಸ್ತಕಗಳು, ದೇಶಿ ಭಾಷೆಗೆ ಅನುವಾದಿಸಿದ ಅನುವಾದ ಗ್ರಂಥಗಳನ್ನು ಹಾಗೂ ಪತ್ರಿಕೆಗಳಲ್ಲಿ ಪ್ರಕಟಗೊಂಡ ಲೇಖನಗಳನ್ನು ಅನುಷಂಗಿಕ ಆಕರ ಸಾಮಾಗ್ರಿಯಾಗಿ ಬಳಸಿಕೊಳ್ಳಲಾಗಿದೆ. ಜೊತೆಗೆ ಹೆಚ್ಚಿನ ಮಾಹಿತಿಯನ್ನು ಅಂತರ್‌ಜಾಲ ತಾಣದಲ್ಲಿ ಕಲೆಹಾಕಿ ಪ್ರಸ್ತುತ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

* * *

ಅಧ್ಯಾಯ : ಎರಡು

## ನವ್ಯಕಲಾ ಪಂಥಗಳ ಹುಟ್ಟು ಮತ್ತು ಬೆಳವಣಿಗೆ

ಕರ್ನಾಟಕದ ಮೇಲಾದ ಪ್ರಭಾವ

ಇಂಪ್ರೆಶನಿಸಂ (ಭಾವಮುದ್ರಾಪಂಥ)

ಪೋಸ್ಟ್ ಇಂಪ್ರೇಶನಿಸಂ (ಭಾವಮುದ್ರಾಪಂಥ ನಂತರ ಶೈಲಿ)

ಫ್ಯೂಚರಿಸಂ (ಭವಿಷ್ಯವಾದದ ಕಲೆ)

ಕ್ಯೂಬಿಸಂ (ಘನಾಕೃತಿ ಕಲೆ)

ಅಮೂರ್ತ ಕಲೆ (ಅಬಸ್ಟ್ರಾಕ್ ಆರ್ಟ್)

ಫಾವಿಸಂ ಪಂಥ

ಏಕ್ಸ್‌ಪ್ರೆಶನಿಸಂ (ಅಭಿವ್ಯಕ್ತವಾದ)

ದಾದಾಯಿಸಂ

ಕರ್ನಾಟಕದ ಮೇಲೆ ನವ್ಯ ಕಲೆಗಳ ಪ್ರಭಾವ

## ಅಧ್ಯಾಯ : ಎರಡು

## ನವ್ಯಕಲಾ ಪಂಥಗಳ ಹುಟ್ಟು ಮತ್ತು ಬೆಳವಣಿಗೆ ಕರ್ನಾಟಕದ ಮೇಲಾದ ಪ್ರಭಾವ

ಆಧುನಿಕ ಕಲೆಯೆಂದರೆ ಹಿಂದಿನ ಕಲೆಗಿಂತ ಬೇರೆಯಾದುದು ಪ್ರಾಚೀನ ಕಾಲದಿಂದಲೂ ಕಲೆಯಲ್ಲಿ ಆಗಾಗ ನವ್ಯತೆಯು ತಲೆದೋರಿತು ಮತ್ತು ಕಲೆಯನ್ನು ಸಂಪನ್ನ ಮಾಡಿತ್ತು. ನಮಗೆ ಆಧುನಿಕ ಕಲೆಯೆಂದರೆ ನಮ್ಮ ಕಾಲದಲ್ಲಿ ಹೊರಬಂದ ಕಲೆ, ಇದನ್ನು ನಾವು ಆಧುನಿಕ ಅಥವಾ ಸಮಕಾಲೀನ ಕಲೆ ಅನ್ನುವುದಕ್ಕಿಂತಲೂ, ನವ್ಯಕಲೆ ಎಂದು ಹೇಳುವುದು ಹೆಚ್ಚು ರೂಢಿಯಾಗಿದೆ. ವಿಜ್ಞಾನದ ಬೆಳವಣಿಗೆ ಮತ್ತು ಇತರ ಪರಿಸ್ಥಿತಿಗಳ ದೆಸೆಯಿಂದ ಕಲೆಯ ಬಗ್ಗೆ ಭಾವನೆಗಳು ಶೈಲಿಗಳು ಬದಲಾಗುತ್ತಿವೆ. ಸಾಹಿತ್ಯ, ಸಂಗೀತ, ಇತರ ಲಲಿತಕಲೆಗಳ ಮೇಲೂ ಆಧುನಿಕತೆಯ ಛಾಯೆ ಬಿದ್ದಿದೆ. ಅವೆಲ್ಲಕ್ಕಿಂತ ಚಿತ್ರಕಲೆಯ ಮೇಲೆ ನವ್ಯಕತೆಯ ಪ್ರಭಾವವು ಅಧಿಕವಾಗಿದೆ.

ಕಲಾವಿದರು ವಸ್ತು, ಸಂಗತಿಗಳನ್ನು ಇದಕ್ಕಿದ್ದಂತೆ ಚಿತ್ರಿಸದೆ ಒಂದು ವಸ್ತು, ಸನ್ನಿವೇಶ ನೋಡಿದಾಗ ಮನಸ್ಸಿನಲ್ಲಿ ಉಂಟಾಗುವ ಭಾವನೆಗಳ ಏರಿಳಿತಗಳನ್ನು ಚಿತ್ರಿಸುವುದೇ ನವ್ಯ ಕಲೆಯ ತಿರುಳಾಗಿದೆ. ನೈಜ ಸಂಗತಿ, ವಸ್ತು ವಿಷಯಗಳನ್ನು ಇದ್ದಕ್ಕಿದಂತೆ ವಿವರವಾಗಿ ಚಿತ್ರಿಸದೆ, ಸಾಂಕೇತಿಕ ರೂಪದಲ್ಲಿ ಅತ್ಯಂತ ಕಡಿಮೆ ರೇಖೆ, ಬಣ್ಣ ವಿನ್ಯಾಸಗಳ ಮೂಲಕ ಭಾವ ಪ್ರಕಟಿಸುವ, ಪ್ರಾತಿನಿಧಿಕ ಚಿತ್ರಗಳು ಈ ಶೈಲಿಗೆ ಸೇರುತ್ತವೆ(ಮಂಜುನಾಥ ಕೆ. ಮಾನೆ, ಚಿತ್ರಕಲಾ ಶಿಕ್ಷಣ, ಪುಟ, ೮೪).

'ಕಲೆಯು ನಿಂತ ನೀರಾಗಬಾರದು, ಬದಲಾವಣೆ, ಬೆಳೆಯುವಿಕೆಗಳು ಜೀವಂತವಾಗಿರುವುದುರ ಲಕ್ಷಣಗಳು. ಈಗೀಗ "ಇದ್ದಕ್ಕಿದ್ದಂತೆ ಚಿತ್ರಿಸುವ ಕೆಲಸವನ್ನು ಕ್ಯಾಮರಾವು ಮಾಡುತ್ತಿದೆ. ಆದುದರಿಂದ ಅದು ಯಂತ್ರದ ಕಾರ್ಯವಾಗಿದೆ" ಎಂದು ಕಾರಣವನ್ನು ಕೊಟ್ಟು ಕೃತಿರಚನೆಯಲ್ಲಿ ಸಾದೃಶ್ಯತೆಯ ಅಗತ್ಯವನ್ನು ತಳ್ಳಿ ಹಾಕುವ ವಾದವು ಪ್ರಬಲವಾಗುತ್ತಿದೆ. "ತದ್ರೂಪಕೃತಿಗಳಲ್ಲೂ ಕಲೆಗಾರನು ಕ್ಯಾಮರಾದಂತೆ ಇದ್ದಕ್ಕಿದ್ದಂತೆ ಚಿತ್ರಿಸುವುದಿಲ್ಲ, ಎದುರಿನಲ್ಲಿ ಕಾಣುವುದಕ್ಕಿಂತಲೂ ಉತ್ತಮವಾಗಬೇಕೆಂದು ಬುದ್ಧಿಯನ್ನು ಉಪಯೋಗಿಸಿ ಕೌಶಲ್ಯದಿಂದ ಸಂಯೋಜಿಸಿ ಪುನಃ ರೂಪಿಸುತ್ತಾನೆ ಆದುದರಿಂದ ಅದರಲ್ಲೂ ಸೃಜನಾತ್ಮಕ ಗುಣವಿರುತ್ತದೆ"ಎಂದು ಆನಂದ ಕುಮಾರಸ್ವಾಮಿಯುವರು ಹೇಳಿದ್ದಾರೆ(ಬಾಯಿರಿ ಬಿ.ಪಿ., ನವ್ಯಕಲೆ ಹಾಗೂ ಕಲೆಗಾಗರರು, ಪುಟ, ೩–೪).

ಇಂದಿನ ಕಲಾಯುಗದಲ್ಲಿ ವಾದಗಳು ಅತ್ಯಂತ ಪ್ರಮುಖವಾಗಿದ್ದು, ಅದೇ ಆಧಾರದ ಮೇಲೆ ಇಂದಿನ ಕಲಾವಿದರು ಅದೇ ಹಾದಿಯಲ್ಲಿ ನಡೆಯುತ್ತಿದ್ದಾರೆ. ವಾದಗಳನ್ನು ಅವಲೋಕನ ಮಾಡಿಕೊಳ್ಳುತ್ತಾ ಕಲೆಯು ಮುಂದಿನ ಮಾರ್ಗವಾಗಿ ಸಾಗುತ್ತಿದೆ. ವಾದಗಳು ಕಲೆಯಲ್ಲಿ ಕ್ರಾಂತಿಯನ್ನು ಹಬ್ಬಿಸಿವೆ ಅಷ್ಟೇ ಅಲ್ಲದೆ ಹೊಸತನವನ್ನು ಸೃಷ್ಟಿಸಲು ಕಲಾವಿದರಲ್ಲಿ ಹೊಸವಿಚಾರಗಳನ್ನು ಹುಟ್ಟು ಹಾಕಿದೆ.

ನವ್ಯ ಕಲೆಯನ್ನು ಮೊದಲ ಬಾರಿಗೆ ತನ್ನ ಕಲಾಕೃಗಳ ಮೂಲಕ ಅಭಿವ್ಯಕ್ತ ಪಡಿಸಿದ ಶ್ರೇಯಸ್ಸು ಕಲಾವಿದ ಎಡ್ವರ್ಡ್ ಮಾನೆಗೆ ಸಲ್ಲುತ್ತದೆ. ಹತ್ತೊಂಬತ್ತನೆಯ ಶತಮಾನದಲ್ಲಿಯ ಪೂರ್ವ ಪರಂಪರೆಯನ್ನು ಬಿಟ್ಟು ಹೊಸ ಹೊಸ ಪಂಥಗಳು ಹುಟ್ಟಿಕೊಂಡಿದನ್ನು ಕುರಿತು ಕೇಳಿದಾಗ ತಮ್ಮ ಪರಂಪರೆ ಪೂರ್ವ ಪರಂಪರೆಗಿಂತ ಭಿನ್ನ ಎಂದು ತೋರಿಸುವುದಕ್ಕೆ ತಮ್ಮ ಪಂಥಕ್ಕೆ ಬೇರೆ ಹೆಸರನ್ನಿರಿಸಿಕೊಂಡ ಕಲಾವಿದರಿದ್ದರೆ ಮಾರ್ಗ ಶೈಲಿಯಿಂದ ಭಿನ್ನವಾದ ಗಾಥಿಕ್ ಕಲಾಪಂಥ, ರೋಮೀಯ ಕಲಾಪಂಥ, ಪುನರುಜ್ಜೀವನ ಕಾಲದ ನವಮಾರ್ಗ ಪಂಥ, ಭಾವಾವಿಷ್ಟ ಪಂಥ– ಇಂತಹ ವಾದಗಳ ಸರಣಿಗಳನ್ನು ಮತ್ತು ಹತ್ತೊಂಬತ್ತನೇಯ ಶತಮಾನದ ಕ್ಷಣಬಿಂಬವಾದದ ವಿಭಿನ್ನ ದೃಷ್ಟಿಗಳನ್ನೂ ಕುರಿತು ಕೇಳಿದ್ದೇವೆ.

ಯೂರೋಪನಲ್ಲಿ ಈ ಕಲಾ ಪಂಥಗಳು ಹುಟ್ಟಿ, ಮುಂದೆ ಅವು ಜಗತ್ತಿಗೆಲ್ಲ ಪಸರಿಸಿ, ಅಂತಾರಾಷ್ಟ್ರೀಯ ಪ್ರಭಾವಗಳನ್ನು ಗಳಿಸುತ್ತಿರುವುದರಿಂದ, ಅಂತಹ ಸರಣಿಗಳ ಪ್ರಯೋಜನವೇನು, ಅವು ಪ್ರಯೋಜಕವೆ, ಅಪ್ರಯೋಜಕವೆ? ಎಂದು ಯೋಚಿಸುವುದು ತೀರಾ ಅವಶ್ಯಕವಾಗಿದೆ. ಏಕೆಂದರೆ ಇಪ್ಪತ್ತನೇ ಶತಮಾನದಲ್ಲಿ ಇನ್ನಷ್ಟು ಹೊಸ ಪಂಥಗಳು ಉದಯಿಸಿವೆ ಕ್ಯೂಬಿಸಂ, ಫ್ಯೂಚರಿಸಂ, ಫಾವಿಸಂ, ಎಕ್ಸ್‌ಪ್ರೆಷನಿಸಂ, ಇಂಪ್ರೆಶನಿಸಂ, ಪೂಯಿಂಟಲಿಸಮ್, ಪೂಸ್ಟ ಇಂಪ್ರೆಶನಿಸಮ್, ಅಬ್‌ಸ್ಟ್ರಾಕ್ಟ್, ಸರ್ರಿಯಲಿಸಂ, ಪೇಮಿನಿಸಂ. ಎಂಬ ಹೊಸ ದೃಷ್ಟಿಕೋನಗಳ ಜತೆಯಲ್ಲಿ, ಕಲೆಗಳಿಗೆ ಬಾಹ್ಯ ವಸ್ತುಗಳೇ ಬೇಕಿಲ್ಲ ಎಂಬ ವಾದಸರಣಿಗಳೂ ಉದಯಿಸಿವೆ(ಶಿವರಾಮ ಕಾರಂತ, ಕಲಾ ಪ್ರಪಂಚ, ಪುಟ, ೩೭೩).

ಕಲಾಕೃತಿಗಳು, ಕಲಾಸ್ತಕರು, ಕಲಾ ವಿದ್ಯಾರ್ಥಿಗಳು ಕೂಡಾ ಬೇರೆ ಬೇರೆ ಪಂಥಗಳ ಹೆಸರನ್ನು ಕೇಳಿ ಬೆರಗುಗೊಳ್ಳುವ ಸ್ಥಿತಿ ಬಂದಿದೆ. ಅಂಥ ವಾದಗಳನ್ನು ಕುರಿತು ಕೆಲವೊಮ್ಮೆ ಒಂದಿಷ್ಟು ವಿವರಣೆ ನೀಡಬಹುದಾದರೂ, ಅಂಥ ಯಾವುದೆ ವಾದ–ಏನೂ ಇಲ್ಲದ ನೆಲೆಯ ಮೇಲೆ ಹುಟ್ಟಿದೆ. ಒಂದು ಪ್ರತ್ಯೇಕ ದೃಷ್ಟಿಯನ್ನೋ, ಪರಂಪರೆಯ ರೀತಿಗಳನ್ನು ಕುರಿತು ಅಸಮಾಧಾನವನ್ನು ಸೂಚಿಸುವುದಕ್ಕೆ ಅಂಥಹ ವಾದಗಳ ಉದಯವಾಯಿತು. ಇವುಗಳಲ್ಲಿ ಕೆಲವನ್ನು ಚಿತ್ರಕಾರರು ತಾವಾಗಿಯೇ ತಮ್ಮ ಉದ್ದೇಶ ಇದು–ಎಂಬ ಘೋಷಣೆಯನ್ನು ಹೇಳಿ ಚಿತ್ರಿಸಿದರೆ ಅಂಥಹ ಸಂದರ್ಭಗಳಲ್ಲಿ ಅಂತವರು ತಮ್ಮ ದೃಷ್ಟಿಕೋನವನ್ನು ಸಮರ್ಥಿಸಿದರು ಎಂದು ಕೇಳುವುದು

ಸಾಧ್ಯ ಆದರೆ ಕೆಲವು ವಾದಗಳ ಹೆಸರುಗಳು ಹುಟ್ಟಿದ್ದು ಕಲಾ ವ್ಯವಸಾಯಿಗಳಿಂದಲ್ಲ ಅವರನ್ನು ಕಂಡು ಬೆರಗುಗೊಂಡ, ನಿಂದಿಸುವ ಸಲುವಾಗಿಯೇ ಪ್ರೇಕ್ಷಕರು ಇಟ್ಟ ಹೆಸರುಗಳಿವು.

ಚಿತ್ರಕಲೆಯಲ್ಲಿ ಒಂದು ಶತಮಾನದಿಂದಿಚೆಗೆ ಮುಖ್ಯವಾಗಿ ಯೂರೋಪಿನಲ್ಲಿ ಹಿಂದೆಂದು ನಡೆಯದಿದ್ದಷ್ಟು ಕ್ರಾಂತಿಯಾಗಿದೆ ಕಲೆಯ ಬಗ್ಗೆ ಭಾವನೆಗಳು ಶೈಲಿಗಳು ಬದಲಾಗುತ್ತಿವೆ. ಸೌಂದರ್ಯಾನುಭವ ಮನಷ್ಯನಿಗೆ ಸಹಜವಾದ ಗುಣ. ಈ ಮೂಲಕ ಮನುಷ್ಯರ ಸೌಂದರ್ಯಾನುಭವ ಸಂವೇದನೆಗಳು ಅಭಿವ್ಯಕ್ತವಾಗುತ್ತವೆ. ಕಲೆಯ ಆಕರವಾಗಲೀ ಮತ್ತು ತತ್ವಗಳಾಗಲಿ ಹಿಂದಿನಿಂದಲೂ ಒಂದೇ ರೀತಿ ನಡೆದು ಬಂದಿಲ್ಲ. ಕಾಲಕಾಲಕ್ಕೆ ತಕ್ಕಂತೆ ಬದಲಾಗುತ್ತಾ ಬಂದಿವೆ ಆದಿ ಮಾನವನ ಗುಹೆ ಮತ್ತು ಶಿಲಾಶ್ರಯಗಳಲ್ಲಿ ರೂಪಿತವಾದ ಕಲೆಗೂ ವ್ಯತ್ಯಾಸವಿದೆ. ಆಸ್ವಾನುಭವದಿಂದ ಉತ್ಪತ್ತಿಯಾದ ಕಲೆ ಮುಂದೆ ಅದರದೇ ತತ್ವ ಸಿದ್ದಾಂತಗಳನ್ನು ಬೆಳೆಸಿಕೊಂಡ ಆ ಚೌಕಟ್ಟಿನಲ್ಲಿ ಬೆಳೆಯುತ್ತಿತ್ತು ಮತ್ತು ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ಕಾರಣಗಳಿಂದ ಕಲೆಯ ಹೊರತಾಗಲು ಸಾದ್ಯವಿಲ್ಲ. ಅವುಗಳ ಪ್ರಭಾವದಿಂದ ಕಲೆಯಲ್ಲಿ ಬದಲಾವಣೆಯಾಗುತ್ತಿರುತ್ತದೆ. ಆಯಾ ಶತಮಾನದಲ್ಲಿ ಆದ ಈ ಬದಲಾವಣೆಗಳ ನಡೆ ಕೆಲವು ವೇಳೆ ತೀವ್ರವಾಗಿರಬಹುದು. ಕೆಲವು ವೇಳೆ ನಿಧಾನವಿರಬಹುದು. ತ್ವರಿತಗತಿಯಲ್ಲಿ ಆದ ಬದಲಾವಣೆಗಳ ಪ್ರಭಾವ ಶೀಘ್ರವಾಗಿ ಕಾಣಬರುತ್ತದೆ. ನಿಧಾನಗತಿಯಲ್ಲಿ ಕಾಣಬೇಕಾದರೆ ಸ್ವಲ್ಪ ಕಾಲಬೇಕು ಇದು ಪ್ರಪಂಚದ ಎಲ್ಲಾ ದೇಶಗಳ ಕಲೆಗಳ ಸ್ಥಿತಿಗಳಲ್ಲಿ ಭಾರತವೇನೂ ಇದಕ್ಕೆ ಹೊರತಲ್ಲ.

ಆದರೆ ಭಾರತದಲ್ಲೇ ಈ ಬದಲಾವಣೆಗಳು ನಿಧಾನಗತಿಯಲ್ಲಿ ಸಾಗಿದ್ದು ೨೦ನೇ ಶತಮಾನದಲ್ಲಿ ಬಹು ತೀವ್ರಗತಿಯಲ್ಲಿ ಬದಲಾವಣೆಗಳಾಗಿವೆ. ಇದರಲ್ಲಿ ಪಾಶ್ಚಾತ್ಯ ರಾಷ್ಟ್ರಗಳ ಕಲಾಪ್ರಕಾರಗಳ ಆಗುಹೋಗುಗಳ ಪ್ರಭಾವ ಅಧಿಕವಾಗಿದೆ ಈ ಹಿನ್ನೆಲೆಯಿಂದ ಇಂದಿನ ಕಲೆಯ ಪರಿಚಯ ಮಾಡಿಕೊಳ್ಳುವಾಗ ಪಾಶ್ಚಾತ್ಯ ರಾಷ್ಟ್ರಗಳ ಕಲಾಕ್ಷೇತ್ರದಲ್ಲಿ ಆದ ಬದಲಾವಣೆಗಳನ್ನು ತಿಳಿದುಕೊಳ್ಳುವುದು ಅತ್ಯಗತ್ಯ. ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಸಮಕಾಲೀನ ಚಿತ್ರಕಲೆಯ ಪ್ರಕ್ರಿಯೆಗಳು ಆರಂಭಗೊಳ್ಳುವದಕ್ಕಿಂತ ಮುಂಚೆ. ಆಧುನಿಕೋತ್ತರ ಕಲಾಪಂಥಗಳು ಹುಟ್ಟಿಕೊಂಡವು ಈ ಹಂತಗಳಲ್ಲಿ ಅನೇಕ ಹೊಸ ಹೊಸ ಕಲಾಶೈಲಿಗಳು ಹುಟ್ಟಿಕೊಂಡವು ಮತ್ತು ಅವುಗಳು ಸಮಕಾಲಿನ ಕಲಾಶೈಲಿಗೆ ಬುನಾದಿಯನ್ನು ಒದಗಿಸಿದವು ಈ ಕುರಿತು ಸಂಕ್ಷಿಪ್ತ ಮಾಹಿತಿಯನ್ನು ಕೆಳಗಿನಂತೆ ಹೇಳಲಾಗಿದೆ.

"ಪಾಶ್ಚಿಮಾತ್ಯ ದೇಶಗಳಲ್ಲಿನ ಪಂಥಗಳ ಹುಟ್ಟು ಮತ್ತು ಸಾವಿನ ಕಥೆ ತುಂಬ ರೋಚಕವಾಗಿದೆ. ಒಬ್ಬ ಕಲಾವಿದ ಒಂದು ಹೊಸ ರೀತಿಯಿಂದ ಕಲಾಕೃತಿ ರಚಿಸಿದರೆ. ಅಥವಾ ಹಿಂದಿನಿಂದ ಬಂದ ಪದ್ಧತಿಯನ್ನು ಬಿಟ್ಟರೆ, ತಮಗೆ ಹೊಳೆದಂತೆ ಏನಾದರೂ ಸೃಷ್ಟಿಸಿದರೆ ಸಾಕು ಅದರ ಅನುಕರಣೆಯನ್ನು ಮಾಡುವಂಥ ಕೆಲವರು ಸಿಕ್ಕೇ ಸಿಗುತ್ತಾರೆ. ಅವರು ಸಮಾಜದಲ್ಲಿ ದೂಡ್ಡ ಸುದ್ದಿಯಲ್ಲಿದ್ದಾರೆ ಈ ಕಲಾ ಪ್ರಕರಗಳ ಪ್ರಚಾರದ ವ್ಯಾಪಕ ವ್ಯವಸ್ಥೆ ಮಾಡಿಕೊಳ್ಳತ್ತಾರೆ. ಈ ಕಾರಣದಿಂದ ಇವುಗಳಿಗೆ ತತ್ವಜ್ಞಾನ ಅಥವಾ ಪಂಥ ಎಂದು ಹೇಳುತ್ತಾರೆ. ಹೀಗೆ ಹುಟ್ಟಿಕೊಂಡ ಪಂಥಗಳು ಒಂದಿಷ್ಟು

ಕಾಲಬದುಕಿ ಉಳಿಯುವ ಶಕ್ತಿ ಇರುತ್ತದೆ. ಈ ಅವಧಿಯಲ್ಲಿ ಕೆಲವರು ಬೆಳಕಿಗೆ ಬರುತ್ತಾರೆ, ನಿಜವಾಗಲೂ ಮಹತ್ವದ ವಿಷಯಗಳನ್ನು ಪ್ರತಿಪಾದಿಸುತ್ತಾರೆ"(ಚಂದ್ರಕಾಂತ ಕುಸನೂರು, ಸಾಹಿತ್ಯ ಮತ್ತು ಚಿತ್ರಕಲೆ, ಪುಟ, ೧೧೮). ಇಂಥ ಕೆಲವು ಪಂಥಗಳ ಪರಿಚಯ ಇಲ್ಲಿ ಮಾಡಿಕೊಡಲಾಗಿದೆ.

## ಇಂಪ್ರೆಶನಿಸಂ (ಭಾವಮುದ್ರಾಪಂಥ)

"ಭಾವಮುದ್ರಾ ಪಂಥವು ೧೮೭೦-೧೮೮೦ರ ಅವಧಿಯಲ್ಲಿ ಕಂಡು ಬಂದಿದೆ. ೧೮೭೪ರಲ್ಲಿ ಫ್ರಾನ್ಸಿನಲ್ಲಿ ಯುವಕಲಾವಿದರ ಒಂದು ಚಿತ್ರ ಪ್ರದರ್ಶನವು ನಡೆಯಿತು. ಕ್ಲಾಡ್ ಮಾನೆ ಎಂಬಾತ ಆ ಚಿತ್ರಗಾರರ ಮುಂದಾಳತ್ವ ವಹಿಸಿದ್ದನು. ಇವನು ಸೂರ್ಯಾಸ್ತಮಾನದ ಒಂದು ಚಿತ್ರವನ್ನು ಪ್ರದರ್ಶಿಸಿದ ಅದರಲ್ಲಿ ಸ್ಪಷ್ಟ ಆಕೃತಿಗಳು ಇರಲಿಲ್ಲ ಆ ಚಿತ್ರಕ್ಕೆ ಇಂಪ್ರೆಶನಿಸಂ ಎಂದರೆ "ಮನಸ್ಸಿನ ಮೇಲೆ ನಾಟಿರುವ ಕಲಾವಿಮರ್ಶಕರು ಪರಿಹಾಸ್ಯ ಮಾಡುವ ಉದ್ದೇಶದಿಂದ ಅಂಥವರನ್ನು ಇಂಪ್ರೆಶನಿಸ್ಟರು" ಎಂದು ಕರೆದರು. ಈ ಕಲಾವಿದರು ಆಯಾ ಸ್ಥಳಕ್ಕೆ ಹೋಗಿ ದೃಶ್ಯಗಳನ್ನು ಪ್ರತ್ಯಕ್ಷವಾಗಿ ನೋಡುತ್ತ ಚಿತ್ರಗಳನ್ನು ಪೂರ್ತಿ ಮಾಡುತ್ತಿದ್ದರು(ಬಾಯಿರಿ ಬಿ.ಪಿ., ನವ್ಯ ಕಲೆ ಹಾಗೂ ಕಲೆಗಾರರು, ಪುಟ,೨).

ಇಂಪ್ರಶನಿಸ್ಟರು ಈ ಪದದ ಮೂಲ ಅರ್ಥವೇನೆಂದರೆ, ಯಾವುದೇ ಒಂದು ವಸ್ತುವನ್ನು ನಾವು ನೋಡಿದಾಕ್ಷಣ ನಮ್ಮ ಮನಸ್ಸಿನ ಮೇಲಾದ ಅನುಭವವನ್ನು ಆಂತರಿಕವಾಗಿ ಆದ ಪರಿಣಾಮವನ್ನು ಕರಗತ ಮಾಡಿಕೊಂಡು ಚಿತ್ರ ರಚಿಸುವುದು. ಅಂದರೆ ಯಾವ ವಸ್ತುವಾಗಲಿ ಇದ್ದಕ್ಕಿದ್ದಂತೆ ಮಾಡುವುದಿಲ್ಲ ತನಗೆ ತಿಳಿದ ರೀತಿಯಲ್ಲಿ ಮಾಡಬಹುದು. ಯಾವುದೇ ಕಲಾಕೃತಿಯು ರಚಿಸಿದ್ದರೂ ಮನಸ್ಸಿನ ಮೇಲಾದ ಪರಿಣಾಮವೂ ರಚಿತವಾಗಬೇಕು. ಚಿತ್ರ ಸತ್ಯವೆಂದು ಮನಸ್ಸಿನ ಅನುಭವದಲ್ಲಿ ಎದ್ದು ಕಾಣಬೇಕು. ಪ್ರಕೃತಿಯಲ್ಲಿ ಆಕಾಶ, ಗಾಳಿ, ಬೆಳಕು ಇವುಗಳ ಮಧ್ಯೆ ಅವುಗಳಿಂದ ಪ್ರತಿಬಿಂಬಿತವಾದ ಬೆಳಕಿನ ಕಿರಣಗಳು ಪ್ರತಿಬಿಂಬಿತವಾದ ಬೆಳಕಿನ ಹರಳುಗಳು ಎಲ್ಲಾ ಒಗ್ಗೂಡಿ ಯಾವುದೆ ವಸ್ತುವಿನ ಸತ್ವ ಚೆನ್ನಾಗಿರಲು ಕಾರಣವಾಗುತ್ತದೆ ಎಂಬುದೆ ಈ ಪಂಥದ ಉದ್ದೇಶ.

ನೆರಳು ಬೆಳಕು, ಋತುಗಳು, ಹತ್ತಿರದ ವಸ್ತುಗಳು ಬದಲಾದಂತೆ ದೃಶ್ಯ ಹೊಸ ರೀತಿಯಿಂದ ಪ್ರಕಟವಾಗುತ್ತದೆ. ಇಂಥ ಹೊಸತನವನ್ನೆ ಬಂಧಿಸುವ ಕೆಲಸ ಇಂಪ್ರೆಶನಿಸ್ಟ ಕಲಾವಿದರು ಮಾಡಿದರು. ಇಂಪ್ರೆಷನಿಸಂ ಶೈಲಿಯ ಪ್ರತಿ ಪಾದಕರು "ಅಗಷ್ಟೆನ್ವಾರ್" "ಅಲ್‌ಫ್ರೆಡ್ ಸಿಸ್ಲಿ" ಕ್ಯಾಮಿಲ್ ಪಿಸಾರೋ" "ಎಡ್ಡಾರ ಡಗಾ" ಕ್ಲಾಡ್‌ಮಾನೆ, ಅಗಸ್ಟ್ ರೆನಾರ್, ಎಡ್ವರ್ಡ್ ಮಾನೆಯು ಬಿಸಿಲಿನಲ್ಲಿ ಉದ್ಯಾನಗಳನ್ನೂ ಅರಳುತ್ತಿರುವ ಪುಷ್ಪಗಳನ್ನು ಚಿತ್ರಸಿದ್ದ. ಅವುಗಳಲ್ಲಿ ರೇಖೆಗಳನ್ನು ಎಳೆಯಲಿಲ್ಲ. "ನಿಸರ್ಗದಲ್ಲಿ ರೇಖೆಗಳಿವೆಯೇ?" ಎಂದು ಪ್ರಶ್ನಿಸಿದವನಾತ. ಆತನೊಡನೆ ಚಿತ್ರದಲ್ಲಿ ಅತ್ಯಂತ ಮುಖ್ಯವಸ್ತು ಯಾವುದು?" ಎಂದು ಪ್ರಶ್ನಿಸಿದಾಗ "ಬೆಳಕು" ಎಂಬುದಾಗಿ ಉತ್ತರಿಸಿದನು.

ಒಟ್ಟಿನಲ್ಲಿ ಇಂಪ್ರೇಷನಿಸ್ಟ ಪ್ರತಿಧ್ವನಿಯು ಒಂದಲ್ಲ ಒಂದು ವಿಧದಲ್ಲಿ ಜಗತ್ತಿನಾದ್ಯಂತ ಕಲಾವಿದರಲ್ಲಿ ಹೊಸ ಚಿಂತನ ಮತ್ತು ದೃಷ್ಟಿಗೆ ಒಂದು ನವ ವ್ಯವಸ್ಥೆ ರೂಪಿತವಾಗಲು ಪ್ರೇರಕವಾಯಿತು.

"ಇಂಪ್ರೇಷನಿಸಂನ ಪ್ರಾತಿನಿಧಿಕ ಕಲಾಕೃತಿಗಳಲ್ಲಿ ಮೊದಲಿಗೆ ಗೋಚರವಾಗುವುದು ಅದರ ಅದ್ಭುತ ಭಾವನೆಗಳು ಫಲಕದ ಅವಕಾಶದಲ್ಲಿ ಕಾಣುವ ವಸ್ತುಗಳ ದೃಶ್ಯ ಮತ್ತು ಮಹತ್ವ ಇವುಗಳ ಒಟ್ಟು, ಅನುಭವವನ್ನು ಕ್ಷಣಾರ್ಧದಲ್ಲಿ ಗ್ರಹಿಸುವುದು ಇರುತ್ತದೆ. ಹೀಗೆ ಇಂಪ್ರೇಶನಿಸಂ ಕೇಲವು ಕಾಲ ಮುಂದುವರೆದು ನಂತರದ ದಿನಗಳಲ್ಲಿ ಅದು ಪೋಸ್ಟ್ ಇಂಪ್ರೇಶನಿಸಂ ಪಂಥವಾಗಿ ರೂಪಗೋಳ್ಳಲು ಕಾರಣವಾಯಿತು ಎಂದು ಹೇಳಬಹುದು.

## ಪೋಸ್ಟ್ ಇಂಪ್ರೇಶನಿಸಂ (ಭಾವಮುದ್ರಾಪಂಥ ನಂತರ ಶೈಲಿ)

ಇದರ ಹೆಸರೇ ಸೂಚಿಸುವಂತೆ ಇಂಪ್ರೇಶನಿಸಂನ ಪ್ರಭಾವದಿಂದ ಹುಟ್ಟಿದ ಸ್ವತಂತ್ರವಾದ ಕಲಾ ಪಂಥವಿದು. "ಸುಮಾರು ಕ್ರಿ.ಶ ೧೯೦೦ರ ಅವಧಿಯಲ್ಲಿ ಸಿಝಾನ್, ಗಾಗೀನ್, ವಾನ್‌ಗಾಗ್ ಈ ಶೈಲಿಯ ಪ್ರಮುಖ ಕಲಾವಿದರಾಗಿದ್ದರು. ಯಾವುದೇ ವಸ್ತುವಿನ ಪರಿಣಾಮವು ರಚನೆಯ ನಂತರ ನಿರ್ಮಿಸಿದ ಕಲಾಕೃತಿಗಳೇ 'ಪೋಸ್ಟ್ ಇಂಪ್ರೇಶನಿಸಂ' ಶೈಲಿಯ ಕಲಾಕೃತಿಗಳಾಗಿವೆ. ಫ್ರಾನ್ಸ್ ಇಂಗ್ಲೆಂಡ್ ದೇಶಗಳಲ್ಲಿ ಈ ಶೈಲಿಯು ಬೆಳೆಯಿತು. ಈ ಕಲಾವಿದರು ಯಥಾವತ್ತಾದ ಚಿತ್ರಕಲೆಯ ವಿರೋಧಿಗಳು, ಯಾವುದೇ ಸಿದ್ಧಾಂತಗಳ ನೆಲಗಟ್ಟಿನ ಮೇಲೆ ಚಿತ್ರ ರಚನೆ ಮಾಡುವುದೆಂದರೆ ವಸ್ತುವಿನಲ್ಲಿನ ಆಂತರಿಕ ಅರ್ಥವನ್ನೇ ನಷ್ಟಗೊಳಿಸಿದಂತೆ ಎಂದು ಈ ಕಲಾವಿದರ ಭಾವನೆಯಾಗಿತ್ತು. ಅಲ್ಲಲ್ಲಿ ಬಣ್ಣಗಾರಿಕೆಯ ವಿಧಾನದಲ್ಲಿ ಭಾವಪ್ರಚೋದನೆಯ ಲೇಪನವಿತ್ತು. "ಜಗತ್ಪ್ರಸಿದ್ಧ ಕಲಾವಿಮರ್ಶಕ ರೋಜರ್ ಪ್ರೈ ಎಂಬಾತನ ಅಭಿಪ್ರಾಯದಂತೆ ಪ್ರಾಣಿ, ಸಸ್ಯ, ಲೋಹ ಇತ್ಯಾದಿ ರೂಪಗಳನ್ನೂ ನೇರವಾಗಿ ರಚಿಸದೆ, ಕಲಾವಿದನು ತನ್ನ ವೈಯಕ್ತಿಕ ಅನಿಸಿಕೆಯಂತೆ ಅನುಭಾವನೆಯಿಂದ ಈ ಶೈಲಿಯಲ್ಲಿ ರಚಿಸಿರುವನು"(ಬಿ.ಪಿ.ಬಾಯಿರಿ, ನವ್ಯ ಕಲೆ ಹಾಗೂ ಕಲೆಗಾರರು, ಪುಟ, ೧೦)

ಸೇಜಾನ್ ಮತ್ತು ವ್ಯಾನಗಾಗ್ ಈ ಪಂಥದ ಮುಖ್ಯ ಕಲಾವಿದರೆಂದು ಹೇಳಬಹುದು. ಒಬ್ಬ ಕಲಾವಿದ ವಸ್ತುವಿನ ಆಂತರಿಕ ಸತ್ವನ್ನು ಪ್ರಕಟಿಸುವ ಪ್ರಯತ್ನ ಮಾಡಿದರೆ ಇನ್ನೊಬ್ಬ ತನ್ನ ಪ್ರತಿಕ್ರಿಯೆಯನ್ನು ಪ್ರಕಟಿಸುವ ಪ್ರಯತ್ನ ಮಾಡುವದು ಇಂಥ ಪಂಥದ ಸಹಜ ಧರ್ಮವಾಗಿತ್ತು. "ಪೋಸ್ಟ್ ಇಂಪ್ರೆಶನಿಸಂ" ಕಲಾವಿದರು ತಮ್ಮ ಅಭಿವ್ಯಕ್ತಿಗೆ ಪ್ರಾಧ್ಯಾನ್ಯ ಕೊಡುತ್ತಿದ್ದರು. ಈ ಪಂಥದ ನಂತರ ಹುಟ್ಟಿಕೂಂಡಿದ್ದೆ ಫ್ಯೂಚರಿಸಂ ಪಂಥ ಎನ್ನಲಾಗಿದೆ.

## ಫ್ಯೂಚರಿಸಂ [ಭವಿಷ್ಯವಾದದ ಕಲೆ]

ಈ ಕಲೆ ಇಟಲಿಯಲ್ಲಿ ಜನ್ಮ ತಾಳಿ ಯುರೋಪದಲ್ಲಿ ಹಬ್ಬಿತು. ಇದು ಆಧುನಿಕ ವಿಜ್ಞಾನ ಯುಗದ ಕಲಾಕೃತಿಗಳಲ್ಲಿ ಚಲನಶೀಲತೆ ಹಾಗೂ ಯಾಂತ್ರಿಕತೆಯ ಗುಣಧರ್ಮಗಳನ್ನು ತಿಳಿಸುವ ಉದ್ದೇಶವೆ ಈ ಶೈಲಿ ಎನ್ನಬಹುದು. ವಸ್ತುವು ಚಲಿಸುತ್ತಿರುವಾಗ, ಅನುಕ್ರಮವಾಗಿ ಹೊಂದುತ್ತಿರುವ

ವಿವಿಧ ಸ್ಥಾನವಿನ್ಯಾಸಗಳನ್ನು ಒಂದೇ ಚಿತ್ರದಲ್ಲಿ ತೋರಿಸತೊಡಗಿದರು. ನಾವಿಂದು ನೋಡುತ್ತಿರುವ ಚಲನಚಿತ್ರಗಳಿಗೆ ಈ ಶೈಲಿಯನ್ನು ಹೋಲಿಸಬಹುದು. ಅದನ್ನು ಚಿತ್ರಸುವ ವಿಧಾನಕ್ಕೆ 'ಫ್ಯೂಚರಿಸಂ' ಅಥವಾ 'ಭವಿಷ್ಯವಾದದ ಕಲೆ' ಎಂಬ ಹೆಸರು ಬಂದಿತು.

ಸೆವರಿನಿ, ಡ್ಯೂಶ್ಯಾಂಪ್ ಕಲಾವಿದರು ಬವಿಷ್ಯವಾದದ ಶೈಲಿಯ ಪ್ರಗತಿಗೆ ಕಾರಣರಾದರು. ಈ ಹೊಸ ವಿಧಾನಕ್ಕೆ 'ಜಿಯೊಕೊಮೊ ಬಲ್ಲಾ' ಎಂಬ ಕಲಾವಿದನ 'ಮಹಿಳೆ ಮತ್ತು ಆಕೆಯ ನಾಯಿ'ಎಂಬ ಕೃತಿಯೆ ಒಂದು ನಿದರ್ಶನ. ಅದರಲ್ಲಿ ಒಂದು ನಾಯಿಯು ವೇಗವಾಗಿ ಹೋಗುತ್ತಿದೆ ಸರಪಣಿಯು ಅಲುಗಾಡುತ್ತಿದೆ ಅದನ್ನು ಹಿಡಿದುಕೊಂಡ ಮಹಿಳೆಯು ನಡೆಯುತ್ತಿದ್ದಾಳೆ ಎಂಬುದನ್ನು ತೋರಿಸಲಾಗಿದೆ. ನಾಯಿಯ ಬಾಲ ಮತ್ತು ಪಾದಗಳ ಚಲನೆಯನ್ನು ಇಪ್ಪತ್ತು ಬೇರೆ ಬೇರೆ ಹಂತಗಳಲ್ಲಿ ಮಸುಕಾಗಿ ಚಿತ್ರಸಿರುವುದನ್ನು ಕಾಣಬಹುದು. ರುಸ್ಸೋಲೋ ಕಲಾಕಾರನು ರಚಿಸಿದ "ಮನೆ ಹಾಗೂ ಬೆಳಕು" ಕಲಾಕೃತಿಯು ಭವಿಷವಾದದ ಶೈಲಿಯಲ್ಲಿ ಬಹು ಆಕರ್ಷವಾಗಿ ನಿರೂಪಿಸಲ್ಪಟ್ಟಿದೆ.

ಫ್ಯೂಚರಿಸಂ ಎಂಬುದು ಸಾಹಿತ್ಯ ಮತ್ತು ಕಲೆಗಳಲ್ಲಿ ಹೊಸತನಗಳನ್ನೆಲ್ಲ ಆರಾಧಿಸುವ ಒಂದು ಚಳುವಳಿಯಾಗಿತ್ತು. ಈ ಶೈಲಿಯ ಪ್ರಮುಖ ಕಲಾವಿದರು. ಆಯಂಪೆರ್ಟೋ-ಟೋಕಿಯೋಗಿ, ಗಿನೋ ಸೆವೆರಿನಿ, ಕಾರ್ಲೋ ಕರಾ, ಹ್ಯೋಗಿ ರುಸ್ಯೋಲೋ, ಗಾಯ್‌ಕೋಮೋ ಬಾಲ್ಲಾ, ಮಾರ್ಸೆಲ್ ಡ್ಯೂಚೆಂಪ್, ಸೇಂಟ್ ಯಲಿಯಾ ಮುಂತಾದವರು ಈ ಶೈಲಿಯ ಕಲಾಕೃತಿಗಳ ಪ್ರದರ್ಶನಗಳನ್ನು ಆರಂಭದಲ್ಲಿ ಮಿಲಾನ್ ನಗರದಲ್ಲೂ ೧೯೧೨ರಲ್ಲಿ ಪ್ಯಾರಿಸಿನಲ್ಲೂ, ಬಳಿಕ ಲಂಡನ್ ಮತ್ತು ಬರ್ಲಿನ್‌ಗಳಲ್ಲೂ ಏರ್ಪಡಿಸಿದರು. ಇದರಲ್ಲಿ ಮೂಡಿದ್ದ ಹೊಸತನವು ಸ್ವಲ್ಪ ಕಾಲ ಮಾತ್ರ ಮೆರೆಯಿತು. ಕಲಾವಿದರಿಗೆ ಇದರ ಮೇಲೆ ಆಸಕ್ತಿ ಕ್ಷೀಣಿಸಿತು ಅದರಿಂದ ಈ ಪಂಥವು ಬಹುಕಾಲ ಬಾಳಲಿಲ್ಲ. ೧೯೧೮ರ ಅವನತಿ ಹೊಂದಲು ಕಾರಣವಾಗಿ ಮುಂದೆ ಕ್ಯೂಬಿಸಂ ಪಂಥವು ಪ್ರಾರಂಭವಾಯಿತು (ಬಾಯಿರಿ ಬಿ.ಪಿ., ನವ್ಯ ಕಲೆ ಹಾಗೂ ಕಲೆಗಾರರು, ಪುಟ-೧೪).

## ಕ್ಯೂಬಿಸಂ (ಘನಾಕೃತಿ ಕಲೆ)

ಚಿತ್ರಕಲೆಯಲ್ಲಿ ಬೆಳಕಿಗೆ ಬಂದ ಹೊಸ ಪಂಥ ಎಂದು ಹೇಳಬಹುದು. ಕ್ಯೂಬಿಸಂ ಪಂಥದ ಅಭಿಪ್ರಾಯವೆನೆಂದರೆ, ಪ್ರಕೃತಿಯಲ್ಲಿ ಇರುವ ಯಾವ ವಸ್ತುವೆ ಆಗಲಿ ಅದರ ಮೂಲ ರೂಪ ಜ್ಯಾಮಿತಿಯ ರೂಪವಿದ್ದು, ಅದರಂತೆ ವಸ್ತು ರೂಪ ನಿರೂಪಣೆ ಕೇವಲ ಹೊರಗಿನ ಆಕಾರದ ಪ್ರತಿರೂಪವಾಗಿರುವುದಿಲ್ಲ. ವಸ್ತುವನ್ನು ಬೇರ್ಪಡಿಸಿ ರೂಪಿತವಾಗುವುದು ಇದರ ಜೊತೆಗೆ ಯಾವುದೇ ವಸ್ತುವಿನ ವಿವಿಧ ಭಾಗ ಕಾಣುವುದಾಗಲಿ ಕಾಣದ ಅಂಶಗಳನ್ನು ಈ ಘನಾಕೃತಿಗಳ ಪದ್ಧತಿಯಲ್ಲಿ ರಚಿಸಲಾಗುವುದು ಇದನ್ನು ಕ್ಯೂಬಿಸ್ಟ್ (ಘನಾಕೃತಿ) ಶೈಲಿಯ ಚಿತ್ರಕೃತಿಗಳೆನ್ನುತ್ತಾರೆ.

೨೦ನೇ ಶತಮಾನದಲ್ಲಿ ಇದರ ವಸ್ತುವಿನ ಹಲವಾರು ಘಟಕಗಳನ್ನು ವಿಶ್ಲೇಷಿಸಿ ಜ್ಯಾಮಿತಿಯ ರೂಪಗಳಿಗೆ ತೋರಿಸುತ್ತಾರೆ. ಮಾನವನ ತಲೆ ಬುರುಡೆಯ ಒಂದು ಗುಂಡು, ಕುತ್ತಿಗೆಯ ಮೇಲಿನ ಇಡಿ ತಲೆಯ ಮೇಲೆ ಒಂದು ಘನಾಕೃತಿ, ಕುತ್ತಿಗೆಯ ಸ್ತಂಭಾಕೃತಿ ಹೀಗೆ ಎಲ್ಲವೂ ಜ್ಯಾಮಿತಿಯ ಆಕೃತಿಗಳಾಗಿ ಸಮ ಆಗಿವೆ ಎನ್ನುತ್ತಾರೆ. ಪಾಲ್ ಸೆಜಾನನು (೧೮೩೯-೧೯೦೬) ದಕ್ಷಿಣ ಭೂದೃಶ್ಯ ಎಂಬ ದೃಶ್ಯದಲ್ಲಿ ನಿಸರ್ಗದಲ್ಲಿ ತೊರುವ ವಕ್ರರೇಖೆಗಳನ್ನು ಮೂಲೆಗಳಾಗಿ ಮಾಡಿ ಚಚೌಕ ಆಕೃತಿಗಳಿಗೆ ಪ್ರಾಧ್ಯಾನ್ಯತೆ ಕೊಟ್ಟಿದ್ದನ್ನು ಕಾಣಬಹುದು. ಅಲ್ಲಿ ವ್ಯಕ್ತಗೊಳಿಸುವುದು ಆತನ ಉದ್ದೇಶವಾಗಿತ್ತು. ಆತನನ್ನು "ಘನಾಕೃತಿ ಕಲೆಯ ಪಿತಾಮಹ" ಎನ್ನುತ್ತಾರೆ.

"ಕ್ಯೂಬಿಸಂ" ಪಂಥದ ಬಹುಮುಖ್ಯ ಕಲಾವಿದ ಪಿಕಾಸೋ. ಪಿಕಾಸೋ ರಚಿಸಿದ ಚಿತ್ರ "Les Demoisellesd" Avignon ೧೯೦೭ ಕ್ಯೂಬಿಸಂನ ಅತ್ಯಂತ ಪ್ರಸಿದ್ಧ ಚಿತ್ರವೆಂದು ಖ್ಯಾತಿ ಪಡೆದಿದೆ. ಪಿಕಾಸೋ ಮತ್ತು ಬ್ರಾಕ್ ಇವರು ತಮ್ಮ ಕಲೆಯಲ್ಲಿನ ಆಕೃತಿಗಳನ್ನು ವಿಭಜಿಸಿ ಜ್ಯಾಮಿತಿಯ ನೆಲೆಯಲ್ಲಿ ಹಿಡಿದಿಡಲು ಪ್ರಯತ್ನ ಮಾಡಿದರು. ಇವರ ಮೇಲೆ 'ಸೆಜಾನೆ' ತಂತ್ರ ಶೈಲಿಯ ಲಕ್ಷಣಗಳು ಕಾಣಿಸುತ್ತವೆ. ನಂತರ ಇವರು ತಮ್ಮದೆ ಆದ ಶೈಲಿಯನ್ನು ರೂಡಿಸಿಕೊಂಡರು. ಬ್ರಾಕ್ ಚಿತ್ರಗಳನ್ನು ನೋಡಿ ಪ್ರಸಿದ್ದ ಕಲಾವಿಮರ್ಶಕ 'Louis vauxelles Barque ueduce everything in cubes' ಎಂದು ಹೇಳುತ್ತಾನೆ. ಕ್ಯೂಬಿಸಂ ಶೈಲಿಯ ಪ್ರಮುಖ ಕಲಾವಿದರು ಪ್ಯಾಬ್ಲೋ ಪಿಕಾಸೊ, ಜಾರ್ಜೆಸ್ಪ್ ಬ್ರೇಕ್, ಜಾನ್‌ಗ್ರೀಸ್, ಫರ್ಡಿನಾಂಡ್ ಲೀಗರ್, ಲೋಯಿ ಮಾರಕಾಸ್, ಅಲ್ಬರ್ಟ- ಗ್ಲೇಜಸ್, ಜೇನ್ ಮೆಟಜಿಂಗರ್,ರಾಬರ್ಟ ಡಿಲಾನೆ, ಜಕ್ಷೀಸ್ ವಿಲಾನ್, ಮಾರ್ಸೆಲ್, ಡೊಚೆಂಪ್. ಮುಂತಾದ ಇವರ ಕಲೆಯೆ ಮುಂದೆ ಅಮೂರ್ತ ಕಲೆಗೆ ದಾರಿ ಮಾಡಿಕೊಟ್ಟಿತು 'ಕ್ಯೂಬಿಸಂ' ಆಧುನಿಕ ಕಲಾ ಪ್ರಪಂಚದ ಮುಖ್ಯ ಪಂಥ ಎಂದೆ ಒಪ್ಪಿಕೊಳ್ಳಬೇಕಾಗುತ್ತದೆ(ಚಂದ್ರಕಾಂತ ಕುಸನೂರು, ಸಾಹಿತ್ಯ ಮತ್ತು ಚಿತ್ರಕಲೆ, ಪುಟ ೧೨೩-೧೨೪).

## ಅಮೂರ್ತ ಕಲೆ (ಅಬಸ್ಟ್ರಾಕ್ ಆರ್ಟ್)

ಹೆಸರೇ ಹೇಳುವಂತೆ ಈ ಕಲೆಯಲ್ಲಿ ರೂಪ ಮತ್ತು ಆಕೃತಿಗಳಿಗೆ ಸ್ಥಾನವಿರುವದಿಲ್ಲ. ಅಮೂರ್ತ ಪಂಥದ ಕಲಾವಿದರಿಗೆ ವಸ್ತುವಿನಿಂದ ಏನನ್ನೂ ಪಡೆದು ಕೊಳ್ಳುವ ಅವಶ್ಯಕತೆ ಮಾತ್ರ, ಒಂದು ವಸ್ತು ಅಥವಾ ದೃಶ್ಯವನ್ನು ನೋಡಿದ ನಂತರ ಅವರ ಮನಸ್ಸಿನಲ್ಲಿ ಉಂಟಾದ ಭಾವನೆಗಳೆ ಅಮೂರ್ತಕಲೆಗೆ ವಸ್ತುವಾಗುತ್ತದೆ ಇಲ್ಲಿ ಭಾವನೆಗಳಿಗೆ ರೂಪಾಕೃತಿ ಇರುವುದಿಲ್ಲ.

ಅಮೂರ್ತ ರಚನೆಗಳಲ್ಲಿ ರೇಖೆಗಳಿಗಿಂತಲೂ ವರ್ಣರಂಜನೆಗೆ ಹೆಚ್ಚು ಮಹತ್ವ ನೀಡಿದರು. ಕಲೆಯ ಅಂಗಗಳು ಎಂದು ನಂಬಿಕೊಂಡು ಬಂದಿದ್ದ ಬೆಳಕು-ನೆರಳುಗಳ ನಿಯಮ, ದೂರ, ಸಮೀಪ, ಉಬ್ಬು-ತಗ್ಗುಗಳನ್ನು ನಿರೂಪಿಸುವ ಕಲಾತಂತ್ರ ಮೊದಲಾದವುಗಳು ಅಮೂರ್ತ ಕಲೆಗಾರರನ್ನು ಬಾಧಿಸುವುದಿಲ್ಲ. ಅಮೂರ್ತ ಕಲೆಗಾರರಲ್ಲಿ ರಶ್ಯನ್ ಚಿತ್ರಗಾರ ವಾಸಿಲಿ ಕ್ಯಾಂಡಿನ್‌ಸ್ಕಿಯು

(೧೮೬೬-೧೯೪೪) ಪ್ರಮುಖನು. ೧೯೦೭ ರಲ್ಲಿ ಮಾಸ್ಕೂದಿಂದ ಮ್ಯೂನಿಕ್‌ಗೆ ತೆರಳಿದ ಮತ್ತೊಬ್ಬ ಅಮೂರ್ತ ಚಿತ್ರಗಾರ ಪಾವಲ್ ಕ್ಲೀ, ಜರ್ಮನಿಯವ, ಹಾಲೆಂಡಿನ ಮಾಂಡ್ರಿಯನ್ ಎಂಬಾತ ೧೯೩೩ ರಲ್ಲಿ 'ಹಳದಿ ಮತ್ತು ಬಿಳಿಪಿನಲ್ಲಿ ವಿನ್ಯಾಸ' ಎಂಬ ಚಿತ್ರಮಾಡಿದ(ಬಾಯಿರಿ ಬಿ.ಪಿ., ನವ್ಯ ಕಲೆ ಹಾಗೂ ಕಲೆಗಾರರು, ಪುಟ-೨೨೦).

"ಅಮೂರ್ತಕಲೆಯೂ ಕಲಾಲೋಕದ ಮುಖವಾದ ಒಂದು ಪಂಥ ಎಂದು ಹೇಳಹುದು. ಅಮೂರ್ತಕಲೆಯಲ್ಲಿನ ಸ್ವಾತಂತ್ರ್ಯ ಮತ್ತು ಸ್ವಚಂದ ಶೈಲಿಯಿಂದ ಇಂಥ ಕಲಾವಿದರ ಸಂಖ್ಯೆ ಜಾಸ್ತಿಯಾಗಿದೆ. ನಮ್ಮ ದೇಶದ ಪ್ರಖ್ಯಾತ ಕಲಾವಿದರಾದ ಶ್ರೀ ಎಂ. ಎಫ್. ಹುಸೇನರ ಕಲೆ ಅತ್ಯಧಿಕ ಅಮೂರ್ತತೆಯ ಕಡಗೆ ವಾಲಿತ್ತು ಎಂಬುದು ಆಶ್ವರ್ಯದ ಸಂಗತಿ ಎಂದೆ ಹೇಳಬೇಕಾಗುತ್ತದೆ. ಆದರೆ ಇವರು ಅಮೂರ್ತ ಕಲಾವಿದರಲ್ಲಾ, ಆದರೆ ಇತ್ತಿಚಿನ ದಿನಗಳಲ್ಲಿ ನೋಡಿದರೆ ಅಮೂರ್ತ ಕಲಾವಿದರನ್ನು ಹೆಚ್ಚಿನ ಸಂಖ್ಯೆಯಲ್ಲಿ ಕಾಣಬಹುದಾಗಿದೆ. ಅದೆ ರೀತಿಯಾಗಿ ಪ್ರಾರಂಭವಾದ ಇನ್ನೊಂದು ಪಂಥವೆಂದರೆ ಫಾವಿಸಂ ಪಂಥ.

**ಫಾವಿಸಂ ಪಂಥ.**

ಫಾವಿಸಂ ಎಂಬುದು ೨೦ನೇಯ ಶತಮಾನದ ಚಿತ್ರಕಲೆಯ ಕ್ರಾಂತಿಗಳಲ್ಲಿ ಮೊದಲನೆಯದು ಅದು ಮನಸ್ಸಿನ ಮೇಲೆ ಅಚ್ಚೊತ್ತುವ ಒಂದು ಶೈಲಿ. ಫಾವಿಸಂ ಕಲಾವಿದರ ಕಲಾಕೃತಿಗಳಲ್ಲಿ ಹಳದಿ ಬಣ್ಣದ ಆಕಾಶ, ಕೆಂಪು ಬಣ್ಣದ ಮರ, ಕಿತ್ತಳೆ ಬಣ್ಣದ ಬಂಡೆ, ಪಚ್ಚೆ ಬಣ್ಣದ ರಸ್ತೆಗಳೂ ಇರುತ್ತವೆ. ಇಂತಹ ಮನೋಧರ್ಮದ ಫ್ರಾನ್ಸಿನ ಯುವ ಕಲಾವಿದರು ಒಂದಾಗಿ, ಹೆನ್ರಿ ಮಾತಿಸ್‌ನ ನೇತೃತ್ವದಲ್ಲಿ ೧೯೦೫ ರಲ್ಲಿ ಪ್ಯಾರಿಸಿನಲ್ಲಿ ತಮ್ಮ ಕೃತಿಗಳ ಒಂದು ಪ್ರದರ್ಶನವನ್ನು ಏರ್ಪಡಿಸಿದರು. ಅವರ ಚಿತ್ರಗಳಲ್ಲಿ ನಯಗಾರಿಕೆ ಇರಲಿಲ್ಲ. ಬಣ್ಣಗಳು ಪ್ರಚಂಡವಾಗಿ ಎಂದು ಕಾಣುತ್ತಿದ್ದವು. ಲೂಯಿಸ್ ವ್ಯಾಸಲೀನ್ ಒಬ್ಬ ಕಲಾವಿಮರ್ಶಕ. ಕಲಾಪ್ರದರ್ಶನ ಗ್ಯಾಲರಿಯಲ್ಲಿ ಬಂದು ನೋಡಿದ ಚಿತ್ರಗಳು ವಿಚಿತ್ರವಾಗಿದ್ದವು. ಅವುಗಳನ್ನು ಏನೆಂದು ಕರೆಯಬೇಕೆಂದು ತಿಳಿಯಲಿಲ್ಲಾ ಆಗ ಅವನ ಬಾಯಿಂದ "ಕೇಜ್ ಆಫ್ ಫಾವ್ಸ್" ಎಂಬ ಮಾತು ಬಂತು. ಅವನಿಗೆ ಅದು ಕಾಡುಪ್ರಾಣಿಗಳ ಪಂಜರದಂತೆ ಕಂಡಿತು. ಈ ವಿಮರ್ಶಕನ ಮಾತಿನಿಂದಲೆ ಈ ಕಲಾಪಂಥಕ್ಕೆ ಫಾವಿಸಂ ಎಂದು ಹೆಸರು ಬಂತೆಂದು ಹೇಳುತ್ತಾರೆ(ಚಂದ್ರಕಾಂತ ಕುಸನೂರು, ಸಾಹಿತ್ಯ ಮತ್ತು ಚಿತ್ರಕಲೆ, ಪುಟ ೧೨೦-೧೨೧).

ಕಾಡಿನಲ್ಲಿರುವ ಮೃಗಗಳ ಸ್ವಚ್ಚಂದತೆ, ನಿರ್ಲಿಪ್ತತೆ ಮತ್ತು ಮುಕ್ತತೆ ಯಾವ ಬಂಧನಕ್ಕೂ ಸೀಮಿತಗೊಳಿಸಲು ಸಾಧ್ಯವಿಲ್ಲ. ಪ್ರಕೃತಿಯಲ್ಲಿನ ಸ್ವಾತಂತ್ರ್ಯದ ಪ್ರತಿನಿಧಿಗಳಂತೆ ಈ ಕಾಡು ಪ್ರಾಣಿಗಳಿರುತ್ತವೆ. ಫಾವಿಸಂ ಕಲಾವಿದರೂ ಇಂಥ ಕಾಡು ಸ್ವಭಾದ ಚಿತ್ರಗಳನ್ನೇ ರಚಿಸುವದರಲ್ಲಿ ತೊಡಗಿದರು.

ಹೆನ್ರೀಮಾಟಿಸ್ ಈ ಪಂಥದ ಆದ್ಯ ಪ್ರವರ್ತಕನೆಂದು ಹೇಳುವುದುಂಟು. ಆಂಡ್ರೆಡೋರಿಯನ್, ಜಾರ್ಗನ್ ಬ್ರಾಕ್, ಆಲ್ಬರ್ಟ್ ಮಾರ್ಕ್ಸ್ ಮುಂತಾದವರು ಫಾವಿಸಂ ಪಂಥದ ಕಲಾವಿದರು. ಇವರ ಬಣ್ಣಗಳೆಲ್ಲವು ಉಗ್ರವಾಗಿಯೆ ಇರುತ್ತವೆ ಮತ್ತು ಸೃಷ್ಟಿಯಲ್ಲಿ ಕಾಣಿಸುವ ಸ್ವಾಭಾವಿಕ ಬಣ್ಣಗಳಿಂದ ಬೇರೆಯಾಗಿರುತ್ತವೆ. ನೋಡುವುದರಲ್ಲಿ ಪ್ರತಿಯೊಬ್ಬನಿಗೂ ಬೇರೆ ರೀತಿಯಲ್ಲಿ ಅನುಭವ ನೀಡುವ ಚಿತ್ರಗಳು ಸಮಾಜವನ್ನು ಅಣಕಿಸುವಂತೆ ಕಾಣುತ್ತವೆ. ಆದರೆ ಈ ಪಂಥದ ಆಯುಷ್ಯ ಮಾತ್ರ ಅಲ್ಪವಾಗಿತ್ತು. ಒಂದೆರಡು ವರ್ಷಗಳಲ್ಲಿಯೇ 'ಫಾವಿಸಂ' ಪಂಥ ಇಲ್ಲದಂತಾಯಿತು ಅಲ್ಪವಧಿಯಲ್ಲಿ ಈ ಪಂಥ ಬೀರಿದ ಪ್ರಭಾವ ಅತ್ಯಂತ ತೀಕ್ಷ್ಣವಾಗಿ ನಂತರದ ದಿನಗಳಲ್ಲಿ ಏಕ್ಸ್‌ಪ್ರೆಶನಿಸಂ ಪಂಥ ಹುಟ್ಟಿಕೊಡಿತ್ತು.

## ಏಕ್ಸ್‌ಪ್ರೆಶನಿಸಂ (ಅಭಿವ್ಯಕ್ತವಾದ)

ಕ್ರಿ.ಶ. ೧೯೧೦–೧೯೨೫ರ ಅವಧಿಯಲ್ಲಿ ಅಭಿವ್ಯಕ್ತವಾದ ಕಲೆಯು ವಿಶೇಷವಾಗಿ ಜರ್ಮನಿಯಲ್ಲಿ ವಿಕಾಸಗೊಂಡಿತು. ಮಾನವನ ಅಂತರಂಗದಿಂದ ಹೊರಹೊಮ್ಮುವ ಭಾವನೆಗಳನ್ನು ಆಧರಿಸಿ ರಚಿಸಿದ ಚಿತ್ರಗಳು ಜರ್ಮನಿಯಲ್ಲಿ ಕಂಡುಬಂದವು. ಆದರೆ ಚಿತ್ರಗಳಿಗೆ ರೂಪ, ಆಕಾರಗಳ ಸ್ಪಷ್ಟತೆ ಕಂಡು ಬರುವುದಿಲ್ಲ. ಏಕ್ಸ್‌ಪ್ರೆನಿಸಂ ಎಂದರೆ ಅಭಿವ್ಯಕ್ತಿವಾದ ಅಥವಾ ವೈಯಕ್ತಿಕ ಭಾವವ್ಯಂಜಕ ಪದ್ದತಿ. ಆ ಪದವೆ ಅದರ ಉದ್ದೇಶವನ್ನು ತಿಳಿಸುವಷ್ಟು ಸ್ಪಷ್ಟವಿದೆ. 'ಕಲೆಯು ಕಲಾವಿದನನ್ನು ಪ್ರತಿಬಿಂಬಿಸತಕ್ಕದ್ದು' ಎಂದು ಮಾರ್ಕ್ಸ್‌ರ್ಯಾಫೆಲನ ಹೇಳಿಕೆ ಏಕಪ್ರೆಶನಿಸಂ ಅಂತಹ ಒಂದು ಕಲೆ ಆಗಿತ್ತು ಎಂದು ಹೇಳಬಹುದು(ಅಶೋಕ ಟಿ.ಅಕ್ಕಿ, ಕಲಾ ಚರಿತ್ರೆ, ಪುಟ–೬೯).

ಈ ಪಂಥಕ್ಕೆ ಉತ್ತಮ ಕಲಾವಿದರಾದ "ವ್ಯಾನ್‌ಗಾಗ್ " ಇವರ ಚಿತ್ರಕಲಾಕೃತಿಗಳಲ್ಲಿ ಯಾವದೇ ವಸ್ತುವಿನ ಆಕಾರ ಸರಳ, ಆದರೆ ಅದನ್ನು ರಚಿಸುವ ಕುಂಚದ ವಿನ್ಯಾಸ ಸುರುಳಿ ಸುತ್ತವ ಸುಳಿಸುಳಿಯಾಗಿ ಹರಿದ ಎತ್ತರವಾದ ಪಟ್ಟೆಗಳಾಗಿದ್ದವು. ಏಕ್ಸ್‌ಪ್ರೆನಿಸಂ ಬಹಳ ಹೆಚ್ಚಾಗಿ ಯುರೋಪ ಮತ್ತು ಜರ್ಮನಿಯಲ್ಲಿ ಹೆಚ್ಚು ಜನಪ್ರಿಯವಾಗಿ ಪ್ರಚಾರದಲ್ಲಿತ್ತು ಎಂದು ತಿಳಿದುಬರುತ್ತದೆ. ಏಕಪ್ರೆಷನಿಸ್ಟ್‌ರು ಎಂದರೆ ಅಭಿವ್ಯಕ್ತಿವಾದಿಗಳು ಅಥವಾ ಭಾವ ಚಿತ್ರಕಾರರೆಂದು ಕರೆದರು, ಇಂತಹ ಕಲಾವಿದರ ಒಂದು ಸಂಘ ೧೯೦೫ ರಲ್ಲಿ ಜರ್ಮನಿಯಲ್ಲಿ ಸ್ಥಾಪನೆಯಾಯಿತು. ಈ ಸಂಘಕ್ಕೆ "ದಿಬ್ರಿಡ್ಜ್" ಯೆಂದು ಕರೆದರು. ಕಾಲ ಕಳೆದಂತೆ ಕ್ರಮೇಣವಾಗಿ ಬೇರೆ ಬೇರೆ ದೇಶಗಳಿಗೆ ಈ ಪಂಥವು ಹರಡಿತು. ಉದಾ : ಅಮೇರಿಕಾ ಮತ್ತು ಬ್ರಿಟನ್‌ಗಳಿಗೂ ಈ ಪಂಥವು ಹರಡಿತು. ಅದು ಚಿತ್ರಕಲೆಗೆ ಮಾತ್ರ ಅಲ್ಲಾ, ಸಂಗೀತ ನಾಟಕಾದಿ ಇತರ ಇನ್ನೂ ಹಲವಾರು ಕ್ಷೇತ್ರಗಳಿಗೂ ಹರಡಿತು.

"ಏಕ್ಸ್‌ಪ್ರೆಶನಿಸಂ" ಕೃತಿಗಾಗಿ ಕಲೆ ಎನ್ನುವ ದಿಕ್ಕಿನಲ್ಲಿ ಎಂದಿಗೂ ಸಾಗಲಿಲ್ಲ ಕಲಾಕೃತಿಯೊಂದು ಒಳಗಿನ ಅಗತ್ಯತೆಯೊಂದರ ಬಾಹ್ಯ ಅಭಿವ್ಯಕ್ತಿ ಎನ್ನುವುದನ್ನು "ಕ್ಯಾಂಡಿನಸ್ಕೆ" ರೂಪಿಸಿದ ಏಕ್ಸ್‌ಪ್ರೆಶನಿಸಂನ ಮೂಲ ತತ್ವಗಳನ್ನು ವಿಶ್ವವ್ಯಾಪ್ತಿಯಾಗಿ ಅನ್ವಯಿಸಬಹುದಾಗಿತ್ತು. ಅದು ಸಾಮಾನ್ಯವಾಗಿ ಮಾನವನ

ಮನೋವಿಜ್ಞಾನಕ್ಕೆ ಸಂಬಂಧಿಸಿದ್ದಲ್ಲದೆ, ಯಾವುದೇ ನಿಶ್ಚಿತ ಜನಾಂಗಕ್ಕೆ ಗುಣಲಕ್ಷಣಗಳಿಗೆ ಹೊಂದಿದ್ದು ಎಂದು ಹೇಳುವುದು ಕಷ್ಟ ಇದರೊಂದಿಗೆ ಇನ್ನೊಂದು ಪ್ರಶ್ನೆ ಉದ್ಭವಿಸಿತು ಆಗ ಇದರ ಮುಂದಿನ ಭಾಗವಾಗಿ ಪ್ರಾರಂಭವಾದ ಪಂಥವೆ ದಾದಾಯಿಸಂ ಎಂದು ಹೇಳಬಹುದು.

## ದಾದಾಯಿಸಂ

ಮೊದಲನೆ ಮಹಾಯುದ್ದದ ನಂತರ ಈ ಕಲಾ ಪಂಥ ಅತಿರೇಕವಾಗಿ ಕಾಣಬರುತ್ತಿತ್ತು ಈ ಚಳುವಳಿ ಹುಟ್ಟಿದ್ದು ಶೂನ್ಯ ತತ್ವದಿಂದ. ಇದು ಮೂಲತಃ ಯುದ್ದವಿರೋಧ ಚಳುವಳಿಯಾಗಿ ಹುಟ್ಟಿದರೂ, ಕ್ರಮೇಣ ಜೀವನದ ಎಲ್ಲಾ ಅಂಶಗಳಿಗೂ ಪರಂಪರೆಯಿಂದ ಬಂದ ಮೌಲ್ಯ, ನಂಬಿಕೆ, ಆಚಾರ, ವಿಚಾರ, ಸಾಹಿತ್ಯ, ಕಲೆ, ವಿದ್ಯೆ ಯಾವುದರಲ್ಲಿಯೂ ನಂಬಿಕೆ ಇಲ್ಲದೆ ವಿರೋಧಿಸುವ ನಾಸ್ತಿಕ ವಾದವಾಗಿ ರೂಪುಗೊಂಡಿತು. ಇದು ಸಾಹಿತ್ಯ ಮತ್ತು ಇತರ ಕ್ಷೇತ್ರಗಳಿಗೂ ವ್ಯಾಪಿಸಿತು. ದಾದಾಯಿಸಂ ಎಲ್ಲ ಪಂಥಗಳಂತೆ ಸ್ಥಾಪಿತ ಸಿದ್ಧಾಂತಗಳ ವಿರುದ್ಧವಾಗಿಯೆ ಹುಟ್ಟಿಕೊಂಡಿತ್ತು. ಎಲ್ಲ ನಿಯಮಗಳನ್ನು ಗಾಳಿಗೆ ತೂರಿ ಮನಸ್ಸಿಗೆ ಬಂದಂತೆ ಚಿತ್ರಿಸುವುದು ದಾದಾಯಿಸಂ ಕಲಾವಿದರ ವಿಶೇಷ ಸ್ವಾಭಾವವೆಂದೆ ಹೇಳಬಹುದಾಗಿತ್ತು. ದಾದಾಯಿಸಂ ಕಲಾವಿದರಲ್ಲಿ ಗೇಲಿ ಮಾಡುವ ಪ್ರವೃತ್ತಿಯೂ ಕಾಣಿಸುತ್ತಿತ್ತು. ಹಿಂದಿನ ಕಲಾತ್ಮಕ ಚಿತ್ರಗಳ ಪ್ರತಿಕೃತಿಗಳನ್ನು ತಯಾರಿಸಿ ಅವುಗಳನ್ನು ವಿರೂಪಗೊಳಿಸುವದು, ಸ್ಕ್ರಾಪ್‌ದಿಂದ ಚಿತ್ರಗಳನ್ನು ರಚಿಸಿ, ಚಿತ್ರರಚನಾ ವಿಧಾನವನ್ನೆ ತಿರಸ್ಕರಿಸುವದು ಮತ್ತು ಅಶ್ಲೀಲವೆಂದು ಪರಿಗಣಿಸಲಾದ ವಿಷಯವನ್ನು ಉದ್ದೇಶ ಪೂರ್ವಕವಾಗಿ ಎತ್ತಿ ತೋರಿಸುವದು. ಈ ಕಲಾವಿದರ ಚಟುವಟಿಕೆಗಳಾಗಿದ್ದವು.

ಇದು ಕೇವಲ ಕಲೆಗೆ ಅಲ್ಲಾ ಸಾಹಿತ್ಯ ಮತ್ತು ಇತರ ಕ್ಷೇತ್ರಗಳವರೆಗೂ ವ್ಯಾಪಿಸಿತ್ತು. ಟ್ರಿಸ್ಟನ ಜಾರಾ, ಆಂದ್ರೆ ಬ್ರಿಟನ್ ಮುಂತಾದ ಕವಿಗಳೂ ಅನೇಕ ಚಿತ್ರಕಲಾವಿದರು ಬಾಗಿಯಾಗಿದ್ದರು. ಆಗಿನ ಕಾಲದಲ್ಲಿ ರಾಜಕೀಯ ಮತ್ತು ಸಾಮಾಜಿಕ ಜೀವನದಿಂದ ಹುಟ್ಟಿದ ಕಲೆಗಳ ಬಗೆಗೆ ಅವರು ತೀವ್ರ ವಿರೋಧ, ಬೇಸರ, ತಿರಸ್ಕಾರ ಇದು ಅಭಿವ್ಯಕ್ತವಾದ ರೀತಿ ವಿಚಿತ್ರ, ತಿವಿದು ಕೆರಳಿಸುವ ಪದ್ಧತಿ ಅರ್ಥ, ಪದ್ಧತಿ ಇಲ್ಲದ ಜೋಡಣೆಯ ಕಾವ್ಯವಾಚಕ ಬರೆಯುತ್ತಿದ್ದರು. ಕಲಾವಿದ 'ಡೋಷಾ' ದಾದಾಯಿಸಂನ ಮುಖ್ಯ ಕಲಾವಿದ. ಇವನ ವಿಚಿತ್ರ ಪ್ರಯೋಗಗಳಿಂದ ಜನರ ನಂಬಿಕೆ ಬುಡಮೇಲು ಮಾಡುವಂತಾಯಿತು. ಜನ ಸುಂದರವೆಂದು ಭಾವಿಸಿದ ಚಿತ್ರಗಳನ್ನು ಅಸುಂದರವಾಗಿಸಿ ತೋರಿಸುವದು ಈ ಕಲಾವಿದರ ಕೆಲಸವಾಯಿತು. ನಗ್ನ ಚಿತ್ರಗಳನ್ನು ದಾದಾಯಿಸಂ ಪಂಥದಲ್ಲಿ ರಚಿಸಿದರು ಅನೇಕ ಜನರು ಮತ್ತು ಕಲಾವಿದರು ಈ ಶೈಲಿಗೆ ದಿಕ್ಕಾರ ಹಾಕಿದ್ದರು ಇಷ್ಟಾದರು "ದಾದಾಯಿಸಂ" ಶೈಲಿಯನ್ನು ಅನೇಕ ಕಲಾವಿದರು ಮುಂದುವರೆಸಿದರು. ಕಲಾವಿದನಿಗೆ ಕಲಾಕೃತಿಯ ರಚನೆಯಲ್ಲಿ ಯಾವ ನಿಯಮ ಹಾಗೂ ಯಾವುದೇ ರೀತಿಯ ಕಟ್ಟು ಪಾಡುಗಳು ಇರಲಿಲ್ಲಾ. ಈ ಸ್ವಾತಂತ್ರ್ಯವೇ ತೀರಾ ವಿಶಾಲಾರ್ಥ ಪಡೆದುಕೊಂಡಾಗ, ಸ್ವೇಚ್ಛಾರೂಪ ಪಡೆದಾಗ "ದಾದಾ" ಪಂಥವು ಬೆಳೆಯಿತು.

ಅದರೊಂದಿಗೆ ಬಂದ ವೈಜ್ಞಾನಿಕ ಅನ್ವೇಷಣೆಗಳಿಗೂ ಜನರಲ್ಲಿ ಇನ್ನೊಂದು ಬಗೆಯ ಪರಿಣಾಮವನ್ನು ಬೀರಿತು. ಹಿಂದಿನಿಂದ ಬಂದ ನಂಬಿಕೆಗಳು, ಎಲ್ಲಾ ಆಚರಣೆಗಳು ಸ್ವಚ್ಛವಾಗಿ ಕಿತ್ತುಕೊಂಡರು. ಇಂಥಹ ಹಲವಾರು ಪಂಥಗಳ ಹಿಂದೆ ಮುಂದೆ ಇನ್ನು ಅನೇಕ ಚಿಕ್ಕ ಪುಟ್ಟ ಪಂಥಗಳು ಹುಟ್ಟಿಕೊಂಡವು. ಕೆಲಕಾಲ ಬದುಕಿ ಸತ್ತುಹೊದವು ಏನೆ ಆದರು ಇವೆಲ್ಲಾ ಪಂಥಗಳು ಕಲಾಪ್ರಪಂಚದಲ್ಲಿ ತಮ್ಮ ಶಕ್ತಿ ಸಾರ್ಮರ್ಥ್ಯಕ್ಕೆ ಅನುಗುಣವಾಗಿ ಹೇಜ್ಜೆ ಗುರುತುಗಳನ್ನು ಮೂಡಿಸಿ ಇಲ್ಲದಂತಾದವು ಪಂಥಗಳ ಹುಟ್ಟು ಸಾವಿನ ಕತೆ ಇಲ್ಲಿಗೆ ಮುಗಿದಂತೆಂದು ಯಾರು ಭಾವಿಸಬಾರದು. ಕಾಲ ಗರ್ಭದಲ್ಲಿ ಇನ್ನು ಎಷ್ಟೋ ಪಂಥಗಳು ಜನ್ಮತಾಳುತ್ತವೆ ಎಂದು ಊಹಿಸಲು ಸಾಧ್ಯವಿಲ್ಲ.

### ಕರ್ನಾಟಕದ ಮೇಲೆ ನವ್ಯ ಕಲೆಗಳ ಪ್ರಭಾವ

ಚಿತ್ರಕಲೆಯ ಹುಟ್ಟು ಬೆಳವಣಿಗೆಯ ಇತಿಹಾಸ ಇತಿಹಾಸದಲ್ಲಿರುವುದೆಲ್ಲವೂ ಸತ್ಯವೆಂದೆನು ಹೇಳಬೇಕಿಲ್ಲ. ಒಟ್ಟಿನಲ್ಲಿ ಆದಿಮಾನವನ ಗುಹಾಚಿತ್ರದಿಂದ ಪ್ರತಿಷ್ಠಾಪನಾ ಕಲೆಯವರೆಗೆ ಪ್ರಪಂಚದಾದ್ಯಂತ ಹಲವಾರು ಆಗುಹೋಗುಗಳ ಕಲಾವಿದರ ಬದುಕಿನ ಕತೆಯನ್ನು ಕೇಳಿದ್ದೇವೆ. "ಬೆಳಕು ಯಾವ ದಿಕ್ಕಿನಿಂದ ಬಂದರೇನು? ಯಾವ ಕಿಟಕಿಯಲ್ಲಿ ತೂರಿ ಬಂದ ಗಾಳಿ ಬೇಡ ನಮಗೆ? ಇನ್ನೊಂದು ಕಲೆಯ ವೈಶಿಷ್ಟವನ್ನು ಗಮನಿಸಿ. ಅದು ನಮ್ಮ ಹಿತಕ್ಕೆ ಬಳಕೆಯಾಗುವುದಾದರೆ ಅದೇಕೆ ಬೇಡವಾಗಬೇಕು ಎಂದು ಪ್ರಶ್ನಿಸಿರುವ ಎಸ್.ಎನ್.ಚಂದ್ರಶೇಖರ್ ಒಂದು ಮಾತನ್ನು ಸ್ಪಷ್ಟಪಡಿಸಿದ್ದಾರೆ." ಹೊರಗಿನಿಂದ ಬಂದ ಗಾಳಿಯ ರಭಸಕ್ಕೆ ನಾವೇ ಹಾರಿ ಹೋಗುವುದು ಬೇಡ ಆಧುನಿಕ ಕಲೆಯ ಅಭ್ಯಾಸಕ್ಕೆ ಏರ್ಪಾಡು ಮಾಡಿದ ಖ್ಯಾತ ಸಂಸ್ಥೆಗಳ ಆರಂಭದ ಪ್ರಾಚಾರ್ಯರೆಲ್ಲ ಪಾಶ್ಚಾರಾಗಿದ್ದರಿಂದ ಆ ಕಲಾಶಾಲೆಗಳ ಅಂಗಳದಲ್ಲಿ ಕಲಿತವರೆಲ್ಲರೂ ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಪಾಶ್ಚಾತ್ಯ ಪ್ರಭಾವಕ್ಕೆ ಒಳಗಾಗಿದ್ದಾರೆ(ಚಂದ್ರಶೇಖರ್ ಎಸ್.ಎನ್., ಚಿತ್ರಕಲಾ ಪ್ರಪಂಚ, ಪುಟ-೫೩೩).

ಭಾರತೀಯ ಚಿತ್ರಕಲೆಯು ಕ್ರಿ.ಶ. ೧೯ನೇ ಶತಮಾನದ ಹೊತ್ತಿಗೆ ತನ್ನ ವೈಭವದ ದಿನಗಳನ್ನು ಕಳೆದುಕೊಂಡು ಕ್ಷಿಣಿಸತೊಡಗಿತು. ಆ ಹೊತ್ತಿಗೆ ಮೊಗಲ್ ರಜಪೂತ ಮತ್ತು ಪಹಾರಿ ಚಿತ್ರಶೈಲಿಗಳ ಅಬ್ಬರ ಕಡಿಮೆಯಾಗಿತ್ತು. ಇದರೊಂದಿಗೆ ಬ್ರಿಟಿಷ ಅಧಿಪತ್ಯವು ಪಾಶ್ಚಾತ್ಯ ಪ್ರಭಾವವನ್ನು ಒತ್ತಾಯ ಪೂರ್ವಕವಾಗಿ ಕಲಾರಂಗದ ಮೇಲೆ ಹೇರತೊಡಗಿತು. ಈ ಎಲ್ಲ ಕಾರಣಗಳಿಂದ ಭಾರತೀಯ ಕಲಾಲೋಕವು ಹೊಸ ಆವಿಷ್ಕಾರಗಳಿಗಾಗಿ ಚಡಪಡಿಸತೊಡಗಿತು.

ಇದರ ಪ್ರತಿಫಲವೆಂಬಂತೆ ೧೯ನೇ ಶತಮಾನ ಕೊನೆಯ ಹೊತ್ತಿಗೆ ರಾಜಾ ರವಿವರ್ಮರು (೧೮೪೮-೧೯೦೬) ಭಾರತೀಯ ಚಿತ್ರಕಲೆಗೆ ಹೊಸ ದಿಕ್ಕನ್ನು ತೋರಿಸಿದರು. ಕೆಲವು ವಿಮರ್ಶಕರು ಹೇಳುವಂತೆ ರಾಜಾ ರವಿವರ್ಮನು ಭಾರತೀಯ ಚಿತ್ರಕಲಾ ಕ್ಷೇತ್ರಕ್ಕೆ ಹೆಚ್ಚಿನದೇನೂ ಮಾಡಲಿಲ್ಲ ಎನ್ನುತ್ತಾರಾದರೂ ಆ ಸಂದರ್ಭದಲ್ಲಿ ಕ್ಷೀಣಿಸುತ್ತಿದ್ದ ಭಾರತೀಯ ಚಿತ್ರಕಲಾ ಕ್ಷೇತ್ರಕ್ಕೆ ಹೊಸ ದಿಕ್ಕನ್ನು

ಕೊಟ್ಟರು ಎಂದು ಹೇಳಬಹುದು. ಪಾಶ್ಚಾತ್ಯ ಶೈಲಿಯ ಚಿತ್ರ ರಚನಾ ಪದ್ಧತಿಯನ್ನು ಬಳಸುವ ಮೂಲಕ ಭಾರತೀಯ ಪೌರಾಣಿಕ ವಿಷಯಗಳಿಗೆ ಹೊಸ ಆಯಾಮಗಳನ್ನು ನೀಡಿದರು. ರೋಮ್ಯಾಂಟಿಸಂ ಶೈಲಿಯಲ್ಲಿ ಚಿತ್ರಿಸುವ ಮೂಲಕ ಮೊದಲಬಾರಿಗೆ ಭಾರತೀಯ ಕಲಾ ಜಗತ್ತಿನ ಪಾಶ್ಚಾತ್ಯ ಶೈಲಿಯೊಂದರ ಪರಿಚಯ ಮಾಡಿಕೊಟ್ಟರು ಇದರಿಂದಾಗಿ ಜನಸಾಮಾನ್ಯರಿಂದ ಹಿಡಿದು ಆಳುವ ಪ್ರಭುವರ್ಗದವರೆಗೂ ಹಲವು ವರ್ಗದ ಜನರಿಗೆ ಕಲೆಯ ಆಸಕ್ತಿಯ ಮರುಪೂರಣ ಮಾಡಿದರು.

ನಂತರದ ಹಂತವು ಬ್ರಿಟಿಷರು ಸ್ಥಾಪಿಸಿದ್ದ ಕಲಾ ಶಾಲೆಗಳ ಮುಖೇನ ತೆರೆದುಕೊಂಡಿತು. ಕಲ್ಕತ್ತಾ, ಮದ್ರಾಸ್, ಮುಂಬೈ ಮತ್ತು ಲಾಹೋರಗಳಲ್ಲಿನ ಕಲಾ ಶಾಲೆಗಳ ಬ್ರಿಟಿಷ್ ಪದ್ಧತಿಯ ಕಲಾ ಶಿಕ್ಷಣ ನೀಡುತ್ತಿದ್ದವು ನಂತರದ ದಿನಗಳಲ್ಲಿ ಪರಿಸ್ಥಿತಿಗೆ ಅನುಸಾರವಾಗಿ ಅವು ಬದಲಾವಣೆಯನ್ನು ಮಾಡಿಕೊಂಡವು, ಇ.ಬಿ. ಹ್ಯಾವಲ್ಲ ಅವರು ಕಲ್ಕತ್ತಾ ಕಲಾ ಶಾಲೆಯ ನಿರ್ದೇಶಕರಾಗಿ ಬಂದನಂತರ ಸಂಪೂರ್ಣ ಪರಿಸ್ಥಿತಿಯೆ ಭಿನ್ನವಾಯಿತು.

ಭಾರತೀಯ ಕಲೆಯ ಅವಜ್ಞೆಯನ್ನು ಸಹಿಸದ ಅದರ ಶ್ರೇಷ್ಠತೆಯನ್ನು ಮನವರಿಕೆ ಮಾಡಿಕೊಟ್ಟರು. ಭಾರತೀಯ ಚಿತ್ರಕಲಾ ಕ್ಷೇತ್ರದಲ್ಲಿರುವ ಹಲವಾರು ಉತ್ತಮ ಅಂಶಗಳನ್ನು ಅಳವಡಿಸಿಕೊಂಡು ಹೊಸ ರೀತಿಯ ಚಿತ್ರಶೈಲಿಯನ್ನು ಹೇಗೆ ರೂಪಿಸಿಕೊಳ್ಳಬೇಕೆನ್ನುವುದು ತಿಳಿಸಿಕೊಟ್ಟರು. ಇದರ ಫಲವಾಗಿಯೆ ಅಬನೇಂದ್ರನಾಥ ಠಾಗೋರರಂತಹ ಶ್ರೇಷ್ಠ ಕಲಾವಿದರು ರೂಪಗೊಳ್ಳಲು ಕಾರಣವಾಯಿತು ಎಂದು ಹೇಳಬಹುದು. ಮುಂದೆ ಅಬನೇಂದ್ರನಾಥರೆ ಭಾರತೀಯ ಚಿತ್ರಕಲೆಯ ಬೆಳವಣಿಗೆಗೆ ಮಾರ್ಗದರ್ಶಿಯಂತೆ ನಿಂತು ಹಲವಾರು ಕಲಾವಿದರನ್ನು ತಯಾರುಮಾಡಿದರು. ಹೀಗೆ ಪಾಶ್ಚಾತ್ಯ ಕಲೆಯ ಪ್ರಭಾವ ಹರಡತೊಡಗಿತು ಇಲ್ಲಿ ನನ್ನ ಅಧ್ಯಯನ ಉದ್ದೇಶ ಕರ್ನಾಟಕದ ಮೇಲಾದ ಪಾಶ್ಚಿಮಾತ್ಯ ಕಲಾ ಶೈಲಿಗಳ ಪ್ರಭಾವ ಆಗಿರುವುದರಿಂದ ಅದರ ಮೇಲೆ ಗಮನಹರಿಸಲಾಗಿದೆ.

ಕರ್ನಾಟಕದಲ್ಲಿ ಸಮಕಾಲೀನ ಕಲೆಯ ಬಗ್ಗೆ ಚರ್ಚಿಸುವಾಗ, ಅದು ಹೇಗೆ ಬೆಳೆದು ಬಂತು ಅದರ ಮುನ್ನಡೆಗೆ ಯಾವುದು ಪ್ರೇರಕ ಮತ್ತು ಉತ್ತೇಜಕ ಸಂಗತಿಗಳು ಕಾರಣ ಎಂಬುದನ್ನು ಸಂಪೂರ್ಣವಾಗಿ ತಿಳಿಯುವ ಅಗತ್ಯವಿದೆ. ಇದಕ್ಕೆ ಮೊದಲು ನಾವು ಮನದಟ್ಟು ಮಾಡಿಕೊಳ್ಳಬೇಕಾದ ಅಂಶವೆಂದರೆ ಕರ್ನಾಟಕ ಇತ್ತೀಚಿಗಷ್ಟೆ ಅಂದರೆ ಕೇವಲ ನಲವತ್ತು ವರ್ಷಗಳ ಹಿಂದೆ ಒಂದು ರಾಜ್ಯವಾಗಿ ರೂಪಗೊಂಡಿತ್ತು. ಅದಕ್ಕೆ ಮೊದಲು ಕರ್ನಾಟಕ ಹರಿದು ಹಂಚಿಹೋಗಿ, ವಿವಿಧ ಆಡಳಿತಗಳಿಗೆ ಒಳಪಟ್ಟಿತ್ತು. ಆದಕಾರಣ ಕರ್ನಾಟಕದ ಏಕೀಕರಣದ ಮುನ್ನ ಈ ರಾಜ್ಯದ ಕಲೆಯ ಒಟ್ಟಾರೆ ಬೆಳವಣಿಗೆಯ ಬಗ್ಗೆ ಇರಲಿ ಸಮಕಾಲಿನ ಕಲೆಯ ಅಭಿವೃದ್ಧಿಯ ಬಗ್ಗೆಯೂ ಕೂಡ ಪೂರ್ಣವಾಗಿ ತಿಳಿದುಕೊಳ್ಳುವುದು ಕಷ್ಟ, ಇದರ ಜೊತೆಗೆ "ನವ್ಯ" (ಮಾಡರ್ನ್) ಮತ್ತು ಸಮಕಾಲೀನ (ಕಂಟೆಂಪ್ರರಿ) ಎಂಬ ಶಬ್ದಗಳ ಸ್ಥೂಲ ಪರಿಚಯವೂ ಅಗತ್ಯ. ಏಕೆಂದರೆ ಈ ಇಪ್ಪತ್ತನೆ ಶತಮಾನ

ಭಾರತೀಯ ಕಲೆಯ ಸಂದರ್ಭದಲ್ಲಿ "ನವ್ಯ" ಮತ್ತು ಸಮಕಾಲೀನ ಎಂಬ ಈ ಎರಡು ಶಬ್ದಗಳ ನಡುವೆ ಹೇಳುವಂಥ ವ್ಯತ್ಯಾಸವೇನೂ ಕಾಣುವುದಿಲ್ಲ. ಈ ಭಿನ್ನತೆಯ ಮೊದಲ ಕುರುಹುಗಳನ್ನು ೧೯ನೇ ಶತಮಾನದ ಮೊದಲ ಭಾಗದಲ್ಲಿ ಗುರುತಿಸಬಹುದು. ಸಂಪ್ರದಾಯದಿಂದ ಭಿನ್ನವಾದ ಜ್ಯಾಮಿತಿ ದೃಷ್ಟಿಕೋನವನ್ನು ಇಟ್ಟುಕೊಂಡು ತ್ರಿಪ್ರಮಾಣಗಳಿಂದ (THREE-DIMENSIONL) ರಚಿತವಾದ ಯುರೋಪಿನ ಕಲಾವಿದರ ಚಿತ್ರಗಳು ಇವೆ. ಸಾಂಪ್ರದಾಯಿಕ ಕಲೆಗೆ ಗೊತ್ತೆ ಇರದ ತೈಲವರ್ಣವನ್ನು ಉಪಯೋಗಿಸಿರುವ ಕೆಲವು ಭಾವ ಚಿತ್ರಗಳು ಇವೆ(ಕರ್ನಾಟಕದ ಸಮಕಾಲಿನ ಕಲಾವಿದರು(ಅಪ್ರಕಟಿತ), ಪುಟ, ೬).

ಆದರೆ ಇವು ಸಾಂಪ್ರದಾಯಿಕ ಕಲಾವಿದರ ಮೇಲೆ ಹೆಚ್ಚಿನ ಪರಿಣಾಮವನ್ನಾಗಲಿ ಪ್ರಭಾವನ್ನಾಗಲಿ ಬೀರಲಿಲ್ಲ. ಬ್ರಿಟಿಷರು ಭಾರತವನ್ನು ಸಂಪೂರ್ಣವಾಗಿ ಆಕ್ರಮಿಸಿಕೊಂಡ ನಂತರ ಆದರೆ ಶೈಕ್ಷಣಿಕ ವ್ಯವಸ್ಥೆಯಲ್ಲಿ ಬದಲಾವಣೆಗಳಾದ ಮೇಲೆಯೆ ಕಲೆ ಸಂಪ್ರದಾಯದಿಂದ ಬೇರೆ ಕಡೆಗೆ ತಿರುಗಿದ್ದು. ಬ್ರಿಟಿಷರು ತಮ್ಮ ಶಿಕ್ಷಣ ವ್ಯವಸ್ಥೆಯಲ್ಲಿ ಮೂಲಬೀಜ ರೂಪದಲ್ಲಾದರು ಕೂಡ ಕಲೆಯನ್ನು ಪರಿಚಯಿಸಿದರು. ಬಹುಪಾಲು ಶಾಲೆಗಳಲ್ಲಿ ಚಿತ್ರಕಲೆಯನ್ನು ಒಂದು ವಿಷಯವಾಗಿ ಪರಿಚಯಿಸಲಾಯಿತು. ಈ ಚಿತ್ರಗಳು ಬ್ರಿಟಿಷರು ನಡೆಸುತ್ತಿದ್ದ ಶಾಲೆಗಳಲ್ಲಿ ಈ ಮಾದರಿಯಲ್ಲಿ ರಚಿತವಾಗುತ್ತಿದ್ದವು. ಇದರ ಪರಿಣಾಮವಾಗಿ ಮತ್ತು ಸಾಮಾನ್ಯ ಜನರು ಕೂಡ ಸಾಂಪ್ರದಾಯಿಕ ಕಲೆಯನ್ನು ಸ್ವಲ್ಪ ಕೆಳಮಟ್ಟದ ಕಲೆಯೆಂದು ನಶಿಸುತ್ತಿರುವುದೆಂದು ಪರಿಗಣಿಸತೊಡಗಿದ್ದರು. ಬ್ರಿಟಿಷರಿಂದ ರಚಿತವಾದ ಅವರಿಂದ ತರಬೇತಿ ಹೊಂದಿದ ಹೊಸ ಕಲಾವಿದರಿಂದ ರಚಿತವಾದ ಕೃತಿಗಳನ್ನು ನವ್ಯ ಎಂದು ಕೊಳ್ಳುವದರ ಜೊತೆಗೆ, ಅದೇ ಮಾದರಿಯನ್ನು ಅನುಕರಿಸಬೇಕು ಎಂದು ಅವರು ಅಂದುಕೊಂಡರು. ನಂತರ ಪಾಶ್ಚಾತ್ಯ ರೀತಿಗಳಲ್ಲಿ ತರಬೇತಿ ಹೊಂದಿದ ಭಾರತೀಯ ಕಲಾವಿದರ ಚಿತ್ರಗಳು ಯಾಂತ್ರಿಕ ರೀತಿಯಲ್ಲಿ ನಕಲುಗಳಾಗತೊಡಗಿದ್ದವು. ಈ ಚಿತ್ರಗಳು ಜನಪ್ರಿಯವಾಗ ತೊಡಗಿದವು.

ಇದರ ಪರಿಣಾಮ ಕೆಲವು ಸಂಸ್ಥೆಗಳ ಮೂಲಕ ಈ ರೀತಿಯ ಕಲಾ ರಚನೆಗೆ ತರಬೇತಿ ನೀಡಲಾರಂಭವಾಯಿತು. "ಮದ್ರಾಸ್ ಸ್ಕೂಲ್ ಆಫ್ ಆರ್ಟ್ ಮತ್ತು ಕ್ರ್ಯಾಫ್ಟ್ಸ್". "ಸರ್ ಜೆ.ಜೆ.ಸ್ಕೂಲ್ ಆಫ್ ಆರ್ಟ್" ಕಲಾವಾತಾವರಣದ ಮೇಲೆ ಬಹಳ ಪ್ರಭಾವ ಬೀರಿದವು. ಮುಂದೆ ಮೈಸೂರಿನ "ಚಾಮರಾಜೇಂದ್ರ ಟೆಕ್ನಿಕಲ್ ಇನ್‌ಸ್ಟಿಟ್ಯೂಟ್" ಮತ್ತು ಬೊಂಬಾಯಿಯ "ನೂತನ ಕಲಾ ಮಂದಿರ" ದಂಥ ಕಲಾ ಶಾಲೆಗಳು ವಿವಿಧ ಭಾಗಗಳ ಕನ್ನಡ ಕಲಾವಿದರ ಮೇಲೆ ಪ್ರಭಾವ ಬೀರುವ ಕೇಂದ್ರ ಬಿಂದುಗಳಾದವು ಬಹಳಷ್ಟು ಜನ ಕಲಾವಿದರು ಇಲ್ಲಿ ತರಬೇತಿ ಪಡೆದರು.

ಹೊಸ ಪೀಳಿಗೆಯ ಕಲಾವಿದರೆಲ್ಲಾ ಮೊದಮೊದಲಿಗೆ ರೊಮ್ಯಾಂಟಿಕ್ ಅಥವಾ ಮೋಹಕ ಶೈಲಿಗೆ ಮಾರುಹೋದರು. ಅಂದರೆ ೧೯ನೆಯ ಶತಮಾನದ ಅಂತ್ಯದಲ್ಲಿ ನಮ್ಮ ಕರ್ನಾಟಕದ ಕಲಾವಿದರ ಅನೇಕ ಕೃತಿಗಳಲ್ಲಿ ಈ ಪ್ರಭಾವ ಎದ್ದು ಕಾಣುತ್ತದೆ ಎಂದು ಹೇಳಬಹುದು. ಮೊದಲನೇ

ಸಾಲಿನಲ್ಲಿ ಹೆಸರಿಸಬಹುದಾದ ಕರ್ನಾಟಕದ ಕಲಾವಿದರೆಂದರೆ ಎಂ.ವೀರಪ್ಪ, ಹನುಮಯ್ಯ, ಮಿಣಜಿಗಿ ಮತ್ತು ರುಮಾಲೆ ಚೆನ್ನಬಸವಯ್ಯ.

ರೋಮ್ಯಾಂಟಿಸಂ ಶೈಲಿ ಭಾರತದಲ್ಲಿ ಬಳಕೆಗೆ ಬರುವ ಹೊತ್ತಿಗೆ, ಇಂಗ್ಲೆಂಡ್ ಮತ್ತು ಫ್ರಾನ್ಸ್ ದೇಶಗಳೆರಡರಲ್ಲೂ ಮಾರ್ಪಾಡುಗಳಾಗಿದ್ದವು. ಸೆಜಾನ್, ಮಾನೆ, ಮೋನೆ, ಡೆಗಾಸ್ ಮುಂತಾದ ಕಲಾವಿದರು ಹೊಸ ಶೈಲಿಯೊಂದನ್ನು ನಿರ್ಮಾಣ ಮಾಡಿದ್ದರು. ಅದೇ ಇಂಪ್ರೆಷನ್ ಅಥವಾ ಬದಲಾಗುತ್ತಿರುವ ಬೆಳಕಿನ ವಿವಿಧ ಪರಿಣಾಮಗಳನ್ನು ಬೀರುವ ಒಂದು ಶೈಲಿ. ಯುವ ಕಲಾವಿದರೆಲ್ಲಾ ಅದರತ್ತ ವಾಲಿದರು. ಆ ಸಮಯಕ್ಕೆ ಮೈಸೂರಿನ ಹಲವು ಕಲಾವಿದರು ಆ ಶಾಲೆಯಲ್ಲಿ ತರಬೇತಿ ಪಡೆದಿದ್ದರಿಂದ ಆ ಶೈಲಿಯ ಪ್ರಭಾವ ನಮ್ಮ ಕರ್ನಾಟಕದ ಕಲಾವಿದರ ಮೇಲೆ ಉಂಟಾಯಿತು. ಅಂದಿನ ಬಹುತೇಕ ನಿಸರ್ಗ ಚಿತ್ರ ಕಲಾವಿದರೆಲ್ಲಾ ಆ ಶೈಲಿಯಲ್ಲಿಯೇ ಬೆಳೆದು ಬಂದರು. ಅವರುಗಳಲ್ಲಿ ಎಂ.ಎಸ್.ಚಂದ್ರಶೇಖರ್, ಎಂ.ಟಿ.ವಿ.ಆಚಾರ್ಯ, ತಿಪ್ಪೇಸ್ವಾಮಿ, ನಂಜುಂಡಸ್ವಾಮಿ ಮುಂತಾದವರು.

ಕರ್ನಾಟಕದವರಾದ ಕೆ.ಕೆ.ಹೆಬ್ಬಾರ, ಎಸ್.ಯು. ನಾಯಕ್ ಮುಂತಾದವರು ಮುಂಬಯಿಯಲ್ಲಿ ನೆಲೆಸಿ, ಅದೇ ಇಂಪ್ರೆಶನ್ ಶೈಲಿಗೆ ಸೇರಿದವರು. ಆದರೆ ಹೆಬ್ಬಾರರ ಶೈಲಿ ಮುಂದೆ ಹೆಚ್ಚು ವೈಯಕ್ತಿಕವಾಗಿ ಮೂಡಿ ಬಂದಿದೆ ಮತ್ತು ಏಕ್ಸ್‌ಪ್ರೆಶನ್‌ತ್ತ ವಾಲಿತು ಎಂದು ಹೇಳಬಹುದು. ಪಾಶ್ಚಾತ್ಯ ಶೈಲಿಗಳ ಪ್ರಭಾವ ಎಷ್ಟು ನಿಖರವಾಗಿದೆಯೆಂದರೆ ಅವರು ಬಳಸುವ ವರ್ಣಭೇದಗಳಲ್ಲೂ ಭಾರತೀಯತೆಗೆ ಬದಲಾಗಿ, ಪಾಶ್ಚಾತ್ಯದ ಮಬ್ಬಾದ ಬೆಳಕೇ ಪ್ರಧಾನವಾಗಿ ಕಾಣುತ್ತದೆ. ನೈಜತೆಗೆ ಸ್ವಲ್ಪವಾದರೂ ಬೆಲೆ ಕೊಡುವ ಈ ಇಂಪ್ರೆಶನಿಸ್ಟ್ ಶೈಲಿಯ ಪ್ರಭಾವ ಕರ್ನಾಟಕದ ಕಲಾವಿದರ ಮೇಲೆ ಹೆಚ್ಚಾಗಿ ಆಗಿತ್ತೆಂತಲೂ ಹೇಳಬಹುದು. ಅವರಲ್ಲಿ ಕೆ. ವೆಂಕಟಪ್ಪನವರು ಒಬ್ಬರಾಗಿದ್ದಾರೆ. ಈಗಿನ ಹೊಸ ಪೀಳಿಗೆಯನ್ನು ಒಳಗೊಂಡ ಹಲವು ಕಲಾಶಾಲೆಗಳಲ್ಲೂ ಈ ಶೈಲಿ ಜಾರಿಯಲ್ಲಿದೆ. ನಂತರ ಹುಟ್ಟಿಕೊಂಡ ಶೈಲಿ ಎಂದರೆ ಅಬ್‌ಸ್ಟ್ರ್ಯಾಕ್ಟ್ ಅಥವಾ ಅಮೂರ್ತ ಚಿತ್ರಣ, ಬ್ರಾಕ್ ಮತ್ತು ಪಿಕಾಸೊರ ಏಕಪ್ರಕಾರವಾದ ಪ್ರಯೋಗಗಳಿಂದ ಉಂಟಾದ ಕ್ಯೂಬಿಸಂ, ಏಕ್ಸ್‌ಪ್ರೆಶನಿಸಂ ಮುಂತಾದವುಗಳು ಕಲಾವಿದರುಗಳಿಗೆ ಎಂದಿಲ್ಲದ ಸ್ವಾತಂತ್ರವನ್ನು ತಂದುಕೊಟ್ಟವು.

ಹಲವಾರು ಜನ ರಾಜ್ಯದ ಶಾಲೆಗಳಲ್ಲಿ ಕಲಾ ಶಿಕ್ಷಕರಾಗಿ ಕೆಲಸಮಾಡಿ, ಕಲೆಯ ಬೆಳವಣಿಗೆಯ ಮೇಲೆ ಪರಿಣಾಮ ಬೀರಿದರು, ಇದರ ಜೊತೆಗೆ ಬೆಂಗಳೂರಿನ ಅ.ನ ಸುಬ್ಬರಾಯ "ಕಲಾಮಂದಿರ" ದಂಥ ಖಾಸಗಿ ಸಂಸ್ಥೆಗಳು ಪಾಶ್ಚಾತ್ಯ ಶೈಲಿಯ ರಚನಾ ತರಬೇತಿಯನ್ನು ನೀಡಲಾರಂಭಿಸಿದವು. ಉತ್ತರ ಕರ್ನಾಟಕದ ವಿಜಯ ಕಲಾ ಮಂದಿರ ಗದಗ ಮತ್ತು ಧಾರವಾಡದ ಸ್ಕೂಲ್ ಆಫ್ ಆರ್ಟ್, ಭಾರತೀಯ ಕಲಾಕೇಂದ್ರ ಮತ್ತು ಬೆಂಗಳೂರಿನ ಕೆನ್ ಕಲಾಶಾಲೆ, ಚಿತ್ರಕಲಾ ಮಹಾವಿದ್ಯಾಲಯ ಹಾಗೂ ಮೈಸೂರಿನ ಚಾಮರಾಜೇಂದ್ರ ದೃಶ್ಯಕಲಾ ಅಕಾಡೆಮಿ ಮಂಗಳೂರಿನ ವಿ.ಜಿ.ಎಂ. ಕಲಾಶಾಲೆ, ಬಿಜಾಪೂರದ ಶ್ರೀಸಿದ್ದೇಶ್ವರ ಕಲಾಮಂದಿರ, ತುಮಕೂರಿನ ರವೀಂದ್ರ ಕಲಾಶಾಲೆ ನಿರ್ಮಿಸುವಲ್ಲಿ

ಶ್ಲಾಘನೀಯ ಕೊಡುಗೆಯನ್ನು ನೀಡಿವೆ. ಹೀಗಾಗಿ ಕರ್ನಾಟಕ ರಾಜ್ಯ ಸ್ಥಾಪನೆಯ ಸಮಯದಲ್ಲಿ ಇಲ್ಲಿಯ ಕಲೆಯಲ್ಲಿ ಯುರೋಪಿನ ಕಲಾ ಶೈಲಿಯಲ್ಲಿ ತರಬೇತಿ ಹೊಂದಿದ ಕಲಾವಿದರೆ ಪ್ರಮುಖರಾಗಿದ್ದರು. ಇವರಲ್ಲಿ ಬೋದನೆಮಾಡುತ್ತಿದ್ದ ಹಲವರಿಗೆ ಚಳುವಳಿಗಳ ಪರಿಚಯ ಸ್ವಲ್ಪವೂ ಇರಲಿಲ್ಲ.

ಕರ್ನಾಟಕ ರಾಜ್ಯ ರಚನೆ ಸಹಜವಾಗಿಯೆ ಜನತೆಯಲ್ಲಿ ಹೊಸ ಉತ್ಸಾಹವನ್ನು ತುಂಬಿತು ಅವರು ಅದುಮಿಟ್ಟ ಆಸೆಗಳು ಹೊರಬರಲು ಆರಂಭಿಸಿದವು. ಕನ್ನಡ ಜನತೆ ಕರ್ನಾಟಕದ ಪ್ರಾಮುಖ್ಯತೆಯನ್ನು ಪುನಃ ಸ್ಥಾಪಿಸಲು ಯತ್ನಿಸಿತು. ಕರ್ನಾಟಕದ ಕಲಾಲೋಕ ಈ ದಿಸೆಯಲ್ಲಿ ಹಿಂದೆ ಬೀಳಲಿಲ್ಲ ಆದರೆ ತಮ್ಮ ಕನಸುಗಳನ್ನು ಈಡೇರಿಸುವ ಹೊಸ ಮಾರ್ಗ ಅವರಿಗೆ ಕಾಣಲಿಲ್ಲ, ಆದರೂ ಕಲೆಯನ್ನು ಬದಲಾದ ಕಾಲಕ್ಕೆ ತಕ್ಕಂತೆ ಹೊಸ ಮಾರ್ಗದಲ್ಲಿ ಕೊಂಡೊಯ್ಯಲು ಕರ್ನಾಟಕದ ಹಲವಾರು ಭಾಗಗಳಲ್ಲಿ ಪ್ರಯತ್ನಗಳು ನಡೆದವು. ಕಲಾಶಾಲೆಗಳ ಮೂಲಕ ಪ್ರದರ್ಶನಗಳ ಮೂಲಕ ಒಂದು ಹೊಸ ವಾತಾವರಣ ಅಷ್ಟರಲ್ಲೆ ಸೃಷ್ಟಿಯಾಗಿತ್ತು. ಈ ಚಟುವಟಿಕೆಗಳು ಕಲಾವಿದರನ್ನು ಮತ್ತು ಕಲಾಸಕ್ತರನ್ನು ಸಾಂಪ್ರದಾಯಿಕದಿಂದ ನವ್ಯತೆಯ ತನಕ ಹಲವು ಮುಖಗಳಿಗೆ ಪರಿಚಯ ಮಾಡಿಕೊಟ್ಟವು. ಅವರಿಗೆ ಕಲೆಯ ಬಗ್ಗೆ ಆಸಕ್ತಿ ಮತ್ತು ಅರಿವು ಮೂಡಿತು.

ಆದರೆ ಇದರ ಗತಿ ಎಷ್ಟು ನಿಧಾನವಾಗಿತ್ತೆಂದರೆ. ಕಲಾ ಶಾಲೆಗಳಲ್ಲಿ ತರಬೇತಿ ಪಡೆದ ಯುವ ಕಲಾವಿದರಿಗೆ ಇದರಿಂದ ತೃಪ್ತಿ ಸಿಗಲಿಲ್ಲ. ಆದಷ್ಟು ಬೇಗ ತಮ್ಮ ಕಲೆಯನ್ನು, ಮತ್ತು ಕರ್ನಾಟಕದ ಕಲೆಯನ್ನು ರಾಜ್ಯದ ಒಳಗೆ ಮತ್ತು ಹೊರಗೆ ಸ್ಥಾಪಿಸಿ, ಮುಖ್ಯ ಸಾಂಸ್ಕೃತಿಕ ವಾಹಿನಿಯನ್ನು ಸೇರುವ ಉದ್ದೇಶ ಅವರದಾಗಿತು. ಇದೇ ಸಮಯದಲ್ಲಿ ಬೆಂಗಳೂರಿನ ಕಲಾ ಲೋಕದಲ್ಲಿ ಹೊಸ ಉತ್ಸಾಹ ಕಾಣಲಾರಂಬಿಸಿತು. ೧೯೫೯ ರಲ್ಲಿ ಕೇಂದ್ರ ಲಲಿತಕಲಾ ಅಕಾಡೆಮಿ ದೆಹಲಿ ರಾಷ್ಟ್ರೀಯ ಕಲಾ ಪ್ರದರ್ಶನದ ಕೆಲವು ಆಯ್ದು ಕೃತಿಗಳನ್ನು ಬೆಂಗಳೂರಿನಲ್ಲಿ ಪ್ರದರ್ಶಿಸಿತು. ಇದು ಕಲಾವಿದರಿಗೆ ಮತ್ತು ಕಲಾವಿದರಿಗೆ ಪರಿಚಯವಿರದ ಬದಲಾಗುತ್ತಿದ್ದ ಕಲಾಲೋಕದ ಬಾಗಿಲು ತರೆದಂತಾಯಿತು.

ಆದರೂ ಯುವ ಕಲಾವಿದರು ಸೂಕ್ತ ಮಾರ್ಗವನ್ನು ಕಾಣದಾಗಿದ್ದರು. ಉನ್ನತ ತರಬೇತಿಯನ್ನು ಪಡೆದ ಅಕ್ಕಪಕ್ಕದ ರಾಜ್ಯಗಳಕಲಾವಿದರು ಇಲ್ಲಿ ಏಕವ್ಯಕ್ತಿ ಮತ್ತು ಸಮೂಹ ಕಲಾ ಪ್ರದರ್ಶನಗಳನ್ನು ಏರ್ಪಡಿಸಿದರು. ಇದರಿಂದ ನಮ್ಮ ಯುವಕಲಾವಿದರ ಉತ್ಸಾಹಕ್ಕೆ ಗರಿಮೂಡಿ ಅವರ ಕಲಾದಾಹ ಇನ್ನೂ ಹೆಚ್ಚಾಯಿತು. ೧೯೬೪ರಲ್ಲಿ ರಾಜ್ಯ ಸರ್ಕಾರ ಕರ್ನಾಟಕ ಲಲಿತಕಲಾ ಅಕಾಡೆಮಿಯನ್ನು ಪ್ರಾರಂಭಿಸಿದ ಮೇಲೆ ಕಲಾ ಲೋಕದಲ್ಲಿ ಹೊಸ ಭರವಸೆ ಮೂಡಿ ನಮ್ಮ ಕಲಾವಿದರು ರಾಷ್ಟ್ರೀಯ ಕಲಾವಾಹಿನಿಯನ್ನು ಸೇರಿ ತಮ್ಮ ಪ್ರತಿಭೆಯನ್ನು ತೋರಿಸುವಂತಾಯಿತು. ಆದರೂ ಕೊಡ ಬಹಳಷ್ಟು ಸರ್ಕಾರಿ ಪೋಷಿತ ಕಲಾ ಸಂಸ್ಥೆಗಳಲ್ಲಿ ಆಗುವಂತೆ, ಕಲಾವಿದರ ಆಶೋತ್ತರಗಳಿಗೆ ಮತ್ತು ರಾಜ್ಯದ ಇತರೆ ಕಲಾಕೇಂದ್ರಗಳಲ್ಲಿ ಕಲೆಯ ಚಟುವಟಿಕೆಗಳು ಉತ್ತಮ ಗತಿಯಲ್ಲಿ ಮುಂದುವರೆವು. ಬೆಂಗಳೂರಿನಲ್ಲಿ ಅಲ್ಲದೆ ದಕ್ಷಿಣ ಕನ್ನಡ ಧಾರವಾಡ, ಬೆಳಗಾವಿ

ಮತ್ತು ಗುಲಬರ್ಗಾದಲ್ಲಿ ಇಂಥ ತಂಡಗಳು ಆಯಾ ಸ್ಥಳಗಳ ಕಲಾ ಚಟುವಟಿಕೆಗಳಿಗೆ ಉತ್ಸಾಹವನ್ನು ತುಂಬಿದವು.

೧೯೬೪ಳ ಬೆಂಗಳೂರಿನ ರವೀಂದ್ರ ಕಲಾಕ್ಷೇತ್ರದಲ್ಲಿ ಆರ್.ಎಂ. ಹಡಪದ್, ಎಸ್.ಎಸ್. ಮುನೋಳಿ, ಜಿ.ವೈ. ಹುಬ್ಳಿಕರ್ ಮತ್ತು ಟಿ.ಕೆ. ಪಟೇಲ್‌ರವರುಗಳು ವ್ಯವಸ್ಥೆ ಮಾಡಿದ 'ವಿ ಫೋರ್' ಕಲಾಪ್ರದರ್ಶನ ನಮ್ಮ ಸಮಕಾಲೀನ ಚಿತ್ರಕಲೆಯಲ್ಲಿ ಹೊಸಗಾಳಿ ಬೀಸಿದ ಅನುಭವ ನೀಡಿತು ಎಂದರೆ ತಪ್ಪಾಗಲಾರದು. ಈ "ನಾಲ್ವರು" ಕಲಾಪ್ರದರ್ಶನವು ಬೆಂಗಳೂರಿನ ಕಲಾ ಕಾರ್ಯ ಕಲಾಪಗಳಿಗೆ ಒಂದು ಹೊಸ ತಿರುವನ್ನೇ ಕೊಟ್ಟಿತ್ತೆನ್ನಬಹುದು(ಪರಶುರಾಮ ಪಿ., ಕರ್ನಾಟಕದ ಚಿತ್ರಕಲಾ ಗ್ಯಾಲರಿಗಳು, ಪುಟ-೩೯).

ತಮ್ಮ ಚಿತ್ರಗಳನ್ನು ಪ್ರದರ್ಶಿಸಲು ಸೂಕ್ತ ಅವಕಾಶ ಮತ್ತು ಸ್ಥಳದ ಅಭಾವ ಕಲಾವಿದರಿಗೆ ಒಂದು ಪ್ರಮುಖ ಅಡಚಣೆಯಾಗಿತ್ತು. ಕಲಾ ಪ್ರದರ್ಶನಕ್ಕೆ ಸೂಕ್ತವಲ್ಲದ ಸ್ಥಳಗಳಲ್ಲಿ ಕೆಲವೊಮ್ಮೆ ಸರದಿಯಾಗಿ ಪ್ರದರ್ಶನಗಳನ್ನು ಏರ್ಪಡಿಸಲಾಗುತ್ತಿತ್ತು. ಈ ಮೇಲೆ ತಿಳಿಸಿದ ರಾಷ್ಟ್ರೀಯ ಕಲಾ ಪ್ರದರ್ಶನವನ್ನು ಇಂಟರ್ ಮೆಡಿಯೆಟ್ ಕಾಲೇಜಿನ(ಈಗಿನ ಸರ್ಕಾರಿ ಕಲಾ ಕಾಲೇಜು) ಒಂದು ಕೊಠಡಿಯಲ್ಲಿ ಏರ್ಪಡಿಸಲಾಗಿತ್ತು ಸೂಕ್ತ ಗ್ಯಾಲರಿಯ ಅಭಾವವೇ ಇದಕ್ಕೆ ಕಾರಣವಾಗಿತ್ತು. ರಾಜ್ಯದ ರಾಜಧಾನಿಯಲ್ಲೆ ಪರಿಸ್ಥಿತಿ ಹೀಗಿದ್ದರೆ ಇತರ ಕಡೆ ಹೇಗಿದ್ದರಬಹುದು ಎಂಬುದನ್ನು ಊಹಿಸಿಕೊಳ್ಳಬಹುದು.

ಕರ್ನಾಟಕದ ಕಲಾಲೋಕದಿಂದ ಬಹಳಕಾಲ ದೂರಹಿದ್ದರೂ. ಕೂಡಾ ಹೆಬ್ಬಾರರನ್ನು ಕರ್ನಾಟಕ ಲಲಿತ ಕಲಾ ಅಕಾಡೆಮಿಯ ಅಧ್ಯಕ್ಷರಾಗಲು ಒಪ್ಪಿಸಲಾಯಿತು. ಅವರಿಂದ ಕರ್ನಾಟಕ ಕಲೆಗೆ ಮತ್ತು ಕಲಾವಿದರಿಗೆ ಹೊಸ ಉತ್ತೇಜನ ಮತ್ತು ಮಾರ್ಗದರ್ಶನ ದೊರೆಯಿತು. ಇಷ್ಟೆಲ್ಲ ಕೆಲಸಗಳನ್ನು ಅವರು ತಮಗಿದ್ದ ಪರಿಮಿತಿಯಲ್ಲಿ ಮಾಡಿದರು. ಅಕಾಡೆಮಿಯ ದೈನಂದಿನ ಚಟುವಟಿಕೆಗಳನ್ನು ಚುರುಕುಗೊಳಿಸು ವುದರ ಜೊತೆಗೆ ಹೆಬ್ಬಾರರು ಯುವ ಮೇಧಾವಿಗಳನ್ನು ಸೇರಿಸಿಕೊಂಡು, ಅವರಿಗೆ ಸೂಕ್ಷ್ಮ ಉತ್ತೇಜನ ನೀಡಿ ಒಂದು ಹೊಸ ಯುವಶಕ್ತಿಯನ್ನು ಸೃಷ್ಟಿಸಿದರು. ಅವರು ಉತ್ತಮ ಭವಿಷ್ಯವಿರುವ ಕಲಾವಿದರನ್ನು ಗುರುತಿಸಿ ಅವರಿಗೆ ವಿದ್ಯಾರ್ಥಿ ವೇತನವನ್ನು ನೀಡಿ ಬರೋಡ ಮತ್ತು ಶಾಂತಿನಿಕೇತನದಂಥ ಹೆಸರಾಂತ ಕಲಾವಿದ್ಯಾಲಯಗಳಿಗೆ ಕಳುಹಿಸಿದ್ದರು. ಈ ಮೂಲಕ ಪ್ರಗತಿಪರ ಕಲಾವಿದರ ಕೇಂದ್ರ ಸೃಷ್ಟಿಯಾಗಿ ಅವರ ಮೂಲಕ ಕಲಾ ಚಳುವಳಿ ಮುಂದುವರಿಯುವಂತಾಯಿತು. ಇದರ ಜೊತೆಗೆ ತಮ್ಮ ಪ್ರತಿಭೆ ಮತ್ತು ಯೋಗ್ಯತೆಯಿಂದ ಕೆಲವು ಯುವ ಕಲಾವಿದರೆ ಕಟ್ಟಿದ ಸಂಸ್ಥೆಗಳು ಪ್ರತ್ಯಾಕ್ಷವಾಗಿ ಮತ್ತು ಪರೋಕ್ಷವಾಗಿ ಕೆಲಸ ಮಾಡಿದ್ದವು. ಉದಾಹರಣೆ ಬೆಂಗಳೂರಿನ ಮೈಸೂರ ಆರ್ಟ್ಸ್ ಕೌನ್ಸಿಲ್ ಕರ್ನಾಟಕ ಪೈಂಟರ್ಸ್‌ರಿಂದ ಸಂಯೋಜಿತ ದಾಕವಿಸ (ದಾವಣಗೇರೆ ಕಲಾ ಶಾಲೆಯ ಹಳೆಯ ವಿದ್ಯಾರ್ಥಿಗಳ ಸಂಘ) ಕಂಟೆಂಪ್ರರಿ ಫೋರಂ ಮತ್ತು ಚಿತ್ರಕಲಾ ಪರಿಷತ್ ಕುವೆಂಪು ಕಲಾ ಸಂಸ್ಥೆ, ಐಡಿಯಲ್ ಫೈನ್ ಆರ್ಟ್ ಸಂಸ್ಥೆ ಗುಲಬರ್ಗಾ

ಕರ್ನಾಟಕದ ಇತರೆ ಪ್ರದೇಶಗಳಲ್ಲಿನ ಸೌತ ಕೆನರಾ ಆರ್ಟ್ ಕೌನ್ಸಿಲ್ ಜಾಗೃತಿಯ ಕ್ರಿಯೇಟಿವ್ ಆರ್ಟ್ ಕೌನ್ಸಿಲ್ ಬೈನ್ನೋ ಆರ್ಟ್ ಕೌನ್ಸಿಲ್ ಮುಂತಾದವು.

ಈ ಎಲ್ಲಾ ಸಂಸ್ಥೆಗಳ ಚಟುವಟಿಕೆಗಳ ಒಟ್ಟಾರೆ ಪರಿಣಾಮ ಏನೆಂದರೆ ಕಾಲಕ್ಕೆ ಅನುಗುಣವಾಗಿ ಬದಲಾಗುವ ಹೊಸ ಗ್ರಹಿಕೆಗಳ ಮತ್ತು ದೃಷ್ಟಿಕೋನಗಳ ಹೊಸ ಜನಾಂಗದ ಕಲಾವಿದರು ಹುಟ್ಟಿಕೊಂಡರು. ಈ ಕಲಾವಿದರು ಆತ್ಮ ವಿಶ್ವಾಸದಿಂದ ಸ್ವಂತ ಆಲೋಚನೆಗಳಿಂದ ಶೈಲಿ ಭಾವ ಮತ್ತು ಮೌಲ್ಯಗಳ ವೈಯಕ್ತಿಕ ಗ್ರಹಿಕೆಯಿಂದ ಮುಂದೆ ಒಂದು ರಾಷ್ಟ್ರೀಯ ಮಟ್ಟದಲ್ಲಿ ಸ್ಪರ್ಧಿಸಿ ಕೀರ್ತಿಗಳಿಸಿದ್ದಾರೆ. ಕರ್ನಾಟಕದ ಸಮಕಾಲೀನ ಕಲೆಯ ಹುಟ್ಟು ಮತ್ತು ಬೆಳವಣಿಗೆಯ ವಿಷಯದಲ್ಲಿ ಕಳೆದ ಹದಿನೈದು ವರ್ಷಗಳು ಮುಖ್ಯವಾದವು. ಈ ಅವಧಿ ಎಷ್ಟು ಮುಖ್ಯವಾದವು. ಎಂಬುದನ್ನು ಈ ಕೆಳಗಿನ ಉದಾಹರಣೆಯ ಮೂಲಕ ವಿವರಿಸಬಹುದು. ಹೆಬ್ಬಾರರು ಅಕಾಡೆಮಿಯ ಅಧ್ಯಕ್ಷರಾದ ಸಮಯದಲ್ಲಿ ಕರ್ನಾಟಕದ ಕಲಾವಿದರ ಕೇವಲ ಐದು ಚಿತ್ರಗಳು ಮಾತ್ರ ರಾಷ್ಟ್ರೀಯ ಕಲಾಪ್ರದರ್ಶನಕ್ಕಾಗಿ ಆಯ್ಕೆಯಾಗಿದ್ದವು. ತದನಂತರದ ಹದಿನೈದು ವರ್ಷಗಳಲ್ಲಿ ಕರ್ನಾಟಕದ ನವ್ಯ ಕಲೆ ಎಷ್ಟೆಂದು ಮುನ್ನೆಡೆದಿದೆ. ಎಂದರೆ ರಾಷ್ಟ್ರಿಯ ಮಟ್ಟದಲ್ಲಿ ನಮ್ಮ ಕಲಾವಿದರು ಹನ್ನೊಂದು ಪ್ರಶಸ್ತಿಗಳನ್ನು ಗಳಿಸಿದ್ದಾರೆ ಗಳಿಸುತ್ತಿದ್ದಾರೆ. ಅವರಲ್ಲಿ ಒಬ್ಬರು ಅಂತರಾಷ್ಟ್ರೀಯ ಖ್ಯಾತಿಯ ಪ್ರಶಸ್ತಿಗಳಿಸಿದ್ದಾರೆ. ತೊಂಬತ್ತು ಜನ ಕಲಾವಿದರ ಚಿತ್ರಗಳು ರಾಷ್ಟ್ರೀಯ ಕಲಾ ಪ್ರದರ್ಶನಕ್ಕೆ ಆಯ್ಕೆಯಾದ ಹಿರಿಮೆಯು ಇದೆ. ಕರ್ನಾಟಕ ಕಲಾ ಚರಿತ್ರೆಯಲ್ಲಿ ಮಹತ್ವದ ಘಟ್ಟವೆಂದರೆ ೧೯೮೦ರಲ್ಲಿ ನಡೆದ ಕರ್ನಾಟಕ ಕಲಾ ಮೇಳ ಈ ಮೇಳದಲ್ಲಿ ಪ್ರಥಮಬಾರಿಗೆ ಸಮಕಾಲಿನ ಕಲಾವಿದರು ಒಂದೆಡೆ ಸೇರಿ ಮಂಗಳೂರಿನ ವೆಂಕಟಪ್ಪ ಚಿತ್ರಶಾಲೆಯಲ್ಲಿ ಕಲಾಮೇಳವನ್ನು ಏರ್ಪಡಿಸಿ ಜನಸಾಮಾನ್ಯರು ಮತ್ತು ಕಲಾವಿದರ ನಡುವಿನ ಅಂತರ ಕಡಿಮೆ ಮಾಡುವ ಪ್ರಯತ್ನ ನಡೆಯಿತು. ಇದುವರೆಗೂ ಹಲವಾರು ಕಲಾ ಮೇಳಗಳು ನಡೆದು ರಾಷ್ಟ್ರಮಟ್ಟದಲ್ಲೂ ಹೆಸರು ಪಡೆದಿವೆ.

ಹೀಗೆ ಕರ್ನಾಟಕ ಕಲೆ ಖಂಡಿತವಾಗಿ ಮುನ್ನಡೆ ಸಾಧಿಸುತ್ತಿದೆ. ಇಲ್ಲಿ ಕುತೂಹಲಕರ ವೈವಿಧ್ಯವನ್ನು ಕಾಣಬಹುದು. ನಮ್ಮಲ್ಲಿ ಹೊಸದನ್ನು ಮತ್ತು ಹಳೆದನ್ನು ಸಮ್ಮಿಲನಗೊಳಿಸುವ ಕಲಾವಿದರಿದ್ದಾರೆ. ನೈಜ ಮತ್ತು ಮೆಟಫೀಸಿಕಲ್ ಮಟ್ಟಗಳಲ್ಲಿ ದಿಟ್ಟ ಪ್ರಯೋಗಗಳನ್ನು ನಡೆಸುವವರಿದ್ದಾರೆ. ಕೆಲವರು ಸಾಮಾಜಿಕ ಹೊಣೆಗಾರಿಕೆಯನ್ನು ತೋರಿಸುತ್ತಿದ್ದಾರೆ. ಹಲವರು ಶುದ್ಧವಾದ ವೈಯಕ್ತಿಕ ಭಾವನೆಗಳನ್ನು ಪ್ರಕಟಿಸುತ್ತಿದ್ದಾರೆ. ಮತ್ತೆ ಕೆಲವರು ಅದ್ಭುತವಾದ ಹೊಸ ಮಾಧ್ಯಮಗಳ ಮೂಲಕ ಪ್ರಯೋಗಗಳನ್ನು ನಡೆಸುತ್ತಿದ್ದಾರೆ. ಕಲೆಯ ಇತಿಹಾಸದ ಮತ್ತು ವಿವಿಧ ತತ್ವ ಪ್ರತಿಪಾದನೆಗಳ ಅರಿವು ಬಹುತೇಕ ಕಲಾವಿದರಿಗೆ ಇದೆ. ತಾವು ಏನು ಮಾಡುತ್ತಿದ್ದೇವೆ, ಮತ್ತು ಏಕೆ ಮಾಡುತ್ತಿದ್ದೇವೆ ಎಂಬುದನ್ನು ಅವರೂ ಚೆನ್ನಾಗಿ ಬಲ್ಲರು. ಬಹಳಷ್ಟು ಕಲಾವಿದರು ಪಾಶ್ಚಾತ್ಯ ದೇಶಗಳ ವಿವಿಧ ಕಲಾ ಚಳುವಳಿಗಳು ಮತ್ತು ಪಂಥಗಳ ಕುರಿತು ಅಧ್ಯಯನ ಮಾಡಿದ್ದಾರೆ. ಆದರೆ ಅವುಗಳಿಂದ ಇವರು ಸಂಪೂರ್ಣ ಪ್ರಭಾವಕ್ಕೆ ಒಳಗಾಗದೆ ತಮ್ಮ ದಿಕ್ಕನ್ನು ಬದಲಿಸಿಲ್ಲ.

ಪ್ರತಿ ಕಲಾಕೃತಿಯೂ ವೈಯಕ್ತಿಕ ಮುದ್ರೆಯಿಂದ ಕೂಡಿದೆ. ಈ ಸಂದರ್ಭದಲ್ಲಿ ಒಂದು ಮುಖ್ಯವಾದ ಪ್ರಶ್ನೆಯನ್ನು ಕೇಳಬಹುದು. ಅದೇನೆಂದರೆ ನಮ್ಮ ಕಲಾವಿದರು ತಮ್ಮ ಕನಸಿನ ಲೋಕದ ಗೂಡುಗಳ ಪರಿಮಿತಿಯೊಳಗೆ ಮಾತ್ರ ವಾಸಿಸುತ್ತಿದ್ದಾರೊ ಅಥವಾ ಅವರಿಗೆ ಸಮಾಜಿಕ ಕಳಕಳಿ ಮತ್ತು ಜವಾಬ್ದಾರಿ ಇದೆಯೊ ಎಂಬುದು. ಈ ಪ್ರಶ್ನೆಗೆ ಉತ್ತರ ಎನ್ನುವಂತೆ ಈ ತಲೆಮಾರಿನ ಹಲವಾರು ಕಲಾವಿದರು ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದರ ಮೂಲಕ ತಮಗೆ ಪರಿಸರದ ಬಗ್ಗೆ ಅದರ ಸಮಸ್ಯೆಗಳ ಬಗ್ಗೆ ಸಂಪೂರ್ಣ ಅರಿವೂ ಇದೆ ಎಂಬುದನ್ನು ಸ್ಪಷ್ಟವಾಗಿ ತೋರಿಸಿದ್ದಾರೆ.

ಸಮಕಾಲೀನ ಕಲೆಯ ಬಗ್ಗೆ ಹೇಳುವುದಾದರೆ, ಕರ್ನಾಟಕದಲ್ಲಿ ಕಾಣುವ ಎಲ್ಲಾ ಚಿತ್ರ ಹಾಗೂ ಶಿಲ್ಪಗಳಲ್ಲೂ ಪಾಶ್ಚಾತ್ಯ ಶೈಲಿಗಳ ಪ್ರಭಾವ ಎದ್ದು ಕಾಣುತ್ತಿದೆ ಎಂದು ಹೇಳಬಹುದು. ಆದರೆ ಇದರಿಂದ ಧೃತಿಗೆಡಬೇಕಾದ ಕಾರಣವೇನಿಲ್ಲ. ಗಾಂಧೀಜಿ ಹೇಳಿದಂತೆ, ನಾವು ಮತ್ತು ನಮ್ಮ ಸಂಸ್ಕೃತಿ ಬೆಳೆಯಬೇಕಾದರೆ ನಮ್ಮ ಕಿಟಕಿಗಳನೆಲ್ಲಾ ತೆರೆದಿಡಬೇಕು. ನಾವು ಜೀವಿಸುವ ಕೊಠಡಿಗೆ ಎಲ್ಲಾ ದಿಕ್ಕಿನ ಗಾಳಿಯೂ ಬರುವಂತೆ ಇರಬೇಕು. ಆದ್ದರಿಂದ ನಾವೇ ಹಾರಿಹೋಗದಿರುವಂತೆ ಮಾತ್ರ ಕಾಪಾಡಿಕೊಳ್ಳಬೇಕು. ಇಪ್ಪತ್ತನೆಯ ಶತಮಾನದ ಬಹುತೇಕ ಕಲಾವಿದರು ಪಾಶ್ಚಾತ್ಯ ಸಂಪ್ರದಾಯವನ್ನೇ ಅನುಸರಿಸಿದರು ಮತ್ತು ಬೆಳೆಸಿದರು. ಈಗಲೂ ಈ ಸನ್ನಿವೇಶ ಬದಲಾಗಿದೆ ಎಂದು ಹೇಳಲಾಗದು.

ಒಂದು ಕಾಲದಲ್ಲಿ ಸಾಧನೆ ಸಾಮಗ್ರಿ ಹಾಗೂ ಅಲಂಕಾರದಲ್ಲಿ ಒಂದು ದೇಶವನ್ನು ಮತ್ತೊಂದು ದೇಶದಿಂದ ಭಿನ್ನವಾಗಿ ಕಾಣಲು ಸಾಧ್ಯವಾಗುತ್ತಿತ್ತು. ಆದರೆ ಇಂದು ವಿಶ್ವದ ಕಲೆ ಬೆಳೆಯುತ್ತಿದ್ದು. ಮತ್ತು ಕಲಾವಿದರು ಬೇಕು–ಬೇಡಿಕೆಗಳು ಹೊಂದಾಗುತ್ತಿರುವುದು ಸ್ಪಷ್ಟವಾಗಿ ಕಾಣುತ್ತದೆ. ಕರ್ನಾಟಕದ ಕಲಾವಿದರು. ಕೂಡ ವಿಶ್ವದಲ್ಲಿ ಆದಂತಹ ಸಂಶೋಧನಾತ್ಮಕ ಹಾಗೂ ಭಾವನಾತ್ಮಕ ವಿಚಾರಗಳನ್ನು ಹೇಳುವಲ್ಲಿ ಯಾವ ರಾಜ್ಯದ ಕಲಾವಿದರಿಗೂ ಕಡಿಮೆಯಿಲ್ಲ ಎಂದು ಹೇಳಬಹುದು. ಈ ಹಿನ್ನೆಲೆಯಲ್ಲಿ ಗಮನಿಸಿದಾಗ ಪಾಶ್ಚಿಮಾತ್ಯ ದೇಶಗಳಲಿನ ಪಂಥಗಳಾದ ಇಂಪ್ರೆಶನಿಸಂ, ಪೋಸ್ಟ್ ಇಂಪ್ರೆಶನಿಸಂ, ಪ್ಯೂಚರಿಸಂ, ಕ್ಯೂಬಿಸಂ, ಅಮೂರ್ತಕಲೆ, ಫಾವಿಸಂ, ಎಕ್ಸ್‌ಪ್ರೆಶನಿಸಂ, ದಾದಾಯಿಸಂ ಮತ್ತು ಇವುಗಳಲ್ಲಿ ಸರ್ರಿಯಲಿಸಂ ಪಂಥವು ಒಂದಾಗಿದೆ. ಪ್ರಸ್ತುತ ಸಂಪ್ರಬಂಧದ ವಿಷಯ ಸರ್ರಿಯಲಿಸಂ ಪಂಥ ಆಗಿರುವುದರಿಂದ ಇನ್ನು ಮುಂದೆ ಸರ್ರಿಯಲಿಸಂ ಪಂಥದ ಕುರಿತು ಚರ್ಚಿಸಲಾಗಿದೆ.

* * *

## ಅಧ್ಯಾಯ : ಮೂರು

## ಕರ್ನಾಟಕದಲ್ಲಿ ಸರ್ರಿಯಲಿಸಂ ಪಂಥದ ಹುಟ್ಟು , ಬೆಳವಣಿಗೆ ಮತ್ತು ಲಕ್ಷಣಗಳು

೧೯೮೦ರ ದಶಕದಲ್ಲಿ ಆರಂಭವಾದ ಹಲವಾರು ಕಲಾಪಂಥಗಳಾದ ಇಂಪ್ರೆಶನಿಸಂ, ಪೋಸ್ಟ್ ಇಂಪ್ರೆಶನಿಸಂ, ಫ್ಯೂಚರಿಸಂ, ಕ್ಯೂಬಿಸಂ, ಅಮೂರ್ತಕಲೆ, ಫಾವಿಸಂ, ಎಕ್ಸ್‌ಪ್ರೆಶನಿಸಂ, ದಾದಾಯಿಸಂ ಈ ಕಲಾ ಪಂಥಗಳು ಒಂದಾದ ನಂತರ ಒಂದರಮೇಲೊಂದು ಪ್ರಭಾವದಂತೆ ಆರಂಭವಾಗಿ ಒಂದಿಷ್ಟು ಕಾಲ ಆಳಿದವು. ಹೀಗೆ ದಾದಾಯಿಸಂನ ಮುಂದುವರೆದ ಪಂಥವಾಗಿ ಸರ್ರಿಯಲಿಸಂ ಪಂಥವು ಅರಂಭವಾಯಿತು. ಪ್ರಸ್ತುತ ಅಧ್ಯಯನವು ಸರ್ರಿಯಲಿಸಂ ಪಂಥವಾಗಿರುವುದರಿಂದ ಮುಂದೆ ಅದರ ವಿವರವನ್ನು ಹೇಳಲಾಗಿದೆ.

ಆಧುನಿಕ ಕಲೆಯಲ್ಲಿ ಹಲವಾರು ಪ್ರಯೋಗಗಳ ಚಿಂತನೆ ನಡೆಯುವಲ್ಲಿ ಮುಂದೆ ಆದ ಬದಲಾವಣೆಯ ಒಂದು ಮುಖ್ಯ ಹಂತ. ಸರ್ರಿಯಲಿಸಂವನ್ನು ದಾದಾಯಿಸಂನ ಮುಂದಿನ ಪಂಥ ಎಂದು ಹೇಳಬಹುದು. ಅಶೂನ್ಯವಾದುದು ಸೊಂಕು ಎದುರಲ್ಲಿ ಕಾಣಬರುತ್ತದೆ. ಚಿತ್ರಕಲೆಯನ್ನು ವಸ್ತುವಿನಿಂದ ವಾಸ್ತವ ಪ್ರಪಂಚದಿಂದ ಜನರ ಮನಸ್ಸಿನ ಕಡೆಗೆ ಚಿತ್ರಕಲೆಯನ್ನು ಸಾರಾಗವಾಗಿ ಹರಿಯತೊಡಗಿತ್ತು. ಅದಕ್ಕೆ ಸರ್ರಿಯಲಿಸಂ ಪಂಥ ಕಾರಣ ಎಂದು ಹೇಳಬಹುದು.

ನವ್ಯ ಸಾಹಿತ್ಯ ಸಿದ್ಧಾಂತವು ೧೯೨೦ ರ ಆರಂಭದಲ್ಲಿ ಪ್ರಾರಂಭವಾದ ಒಂದು ಸಾಂಸ್ಕೃತಿಕ ಚಳುವಳಿಯಗಿದ್ದು. ಅದರ ದೃಶ್ಯಕಲಾಕೃತಿಗಳು ಮತ್ತು ಬರಹಗಳಿಗೆ ಹೆಸರುವಾಸಿಯಾಗಿದೆ. ಕಲಾವಿದರು ಛಾಯಾಗ್ರಹಣದ ನಿಖರತೆಯೊಂದಿಗೆ ಅನಿಯಂತ್ರಿತ ತರ್ಕಬದ್ದ ದೃಶ್ಯಗಳನ್ನು ಚಿತ್ರಿಸಿದರು, ದೈನಂದಿನ ವಸ್ತುಗಳಿಂದ ವಿಚಿತ್ರ ಜೀವಿಗಳನ್ನು ಸೃಷ್ಟಿಸಿದರು ಮತ್ತು ಪ್ರಜ್ಞಾಶೂನ್ಯತೆ ಸ್ವತಃ ವ್ಯಕ್ತಪಡಿಸಲು ಅನುಮತಿಸುವ ವರ್ಣಚಿತ್ರ ತಂತ್ರಗಳನ್ನು ಅಭಿವೃದ್ಧಿಪಡಿಸಿದರು. ನವ್ಯ ಸಾಹಿತ್ಯ ಸಿದ್ಧಾಂತವು ವಿಶ್ವ

ಸಮರ ಒಂದರ ಅವದಿಯಲ್ಲಿ ದಾದಾ ಚಟುವಟಿಕೆಗಳಿಂದ ಹೊರಹೊಮ್ಮಿತು ಮತ್ತು ಚಳುವಳಿಯ ಪ್ರಮುಖ ಕೇಂದ್ರ ಪ್ಯಾರಿಸ್ ಆಗಿತ್ತು. ೧೯೨೦ರ ದಶಕದಿಂದಲೂ ಚಳುವಳಿ ಪ್ರಪಂಚದಾದ್ಯಂತ ಹರಡಿತು ಅಂತಿಮವಾಗಿ ದೃಶ್ಯಕಲೆಗಳು, ಸಾಹಿತ್ಯ, ಚಲನಚಿತ್ರ ಮತ್ತು ಅನೇಕ ದೇಶಗಳ ಭಾಷೆ, ಸಂಗೀತ ಮತ್ತು ರಾಜಕೀಯ ಚಿಂತನೆ, ಅಭ್ಯಾಸ, ತತ್ವಶಾಸ್ತ್ರ ಮತ್ತು ಸಾಮಾಜಿಕ ಸಿದ್ಧಾಂತದ ಮೇಲೆ ಪರಿಣಾಮ ಬೀರಿತು.

ಪ್ಯಾರಿಸ್‌ನಲ್ಲಿ ಕಲಾ ಚಳುವಳಿಯಾಗಿ ಹೊರಹೊಮ್ಮಿದ ಮೂರು ವರ್ಷಗಳ ಮುಂಚಿತವಾಗಿ ಮೂರು ವರ್ಷಗಳ ಹಿಂದೆ ಗುವಾಲ್ಲೊ ಅಪೋಲಿನಿಯರ್ ಎಂಬಾತ ಮಾಚ್ ೧೯೧೭ರಲ್ಲಿ "ಸರ್ರಿಯಲಿಸಮ್" ಪದವನ್ನು ಸೃಷ್ಟಿಸಿದ್ದಾನೆ. ಅವರು ಪಾಲ್ ಡರ್ಮೆಗೆ ಪತ್ರಯೊಂದರಲ್ಲಿ ಹೀಗೆ ಬರೆಯುತ್ತಾರೆ. "ಎಲ್ಲಾ ವಿಷಯಗಳು ಪರಿಗಣಿಸಲ್ಪಟ್ಟಿವೆ, ನಾನು ಮೊದಲು ಬಳಸಿದ ಅತೀಂದ್ರಿಯವಾದಕ್ಕಿಂತ ಅತಿವಾಸ್ತವಿಕವಾದವನ್ನು ಅಳವಡಿಸಿಕೊಳ್ಳುವುದು ಒಳ್ಳೆಯದು". ಅಪೋಲಿನಿಯರ್ ಈ ಪದವನ್ನು ಸೆರ್ಗೆ ಡಯಾಗ್ಲಿವನ್, ಬ್ಯಾಲೆಟ್ಸ್ ರಸ್ಸೆಸ್, ಪೆರೇಡ್ಗಾಗಿ ೧೮ ಮೇ ೧೯೧೭ ರಂದು ಪ್ರಥಮ ಪ್ರದರ್ಶನದಲ್ಲಿ ಬಳಸಿಕೊಂಡರು. ವಿಶ್ವಸಮರ ಒಂದರ ಪ್ಯಾರಿಸ್ ಮೂಲದ ಬರಹಗಾರರಿಗೆ ಮತ್ತು ಕಲಾವಿದರಿಗೆ ಹರಡಿತು ಹೀಗೆ ಮಧ್ಯಂತರದಲ್ಲಿ ಅನೇಕರು ದಾದಾ ಪಂಥದಲ್ಲಿ ಭಾಗಿಯಾದರು. ಹೆಚ್ಚಿನ ವಿಚಾರವಾದಿ ಚಿಂತನೆ ಮತ್ತು ಮಧ್ಯಮ ವರ್ಗ ಮೌಲ್ಯಗಳು ಯುದ್ದದ ಸಂಘರ್ಷವನ್ನು ವಿಶ್ವದ ಮೇಲೆ ತಂದವು ಎಂದು ನಂಬಿದ್ದರು. ದಾದಾವಾದಿಗಳು ಮತ್ತು ಕಲಾ ಕೆಲಸಗಳೊಂದಿಗೆ ಪ್ರತಿಭಟಿಸಿದರು. ಯುದ್ದದ ನಂತರ ಅವರು ಪ್ಯಾರಿಸ್‌ಗೆ ಮರಳಿದಾಗ ದಾದಾ ಚಟುವಟಿಕೆಗಳು ಮುಂದುವರೆದವು. ಯುದ್ದದ ಸಮಯದಲ್ಲಿ ಔಷಧಿ ಮತ್ತು ಮನೋವೈದ್ಯಶಾಸ್ತ್ರದಲ್ಲಿ ತರಬೇತಿ ಪಡೆದ ಆಂಡ್ರೆ ಬ್ರೆಟನ್ ನರವೈಜ್ಞಾನಿಕ ಆಸ್ಪತ್ರೆಯಲ್ಲಿ ಸೇವೆ ಸಲ್ಲಿಸಿದರು, ಅಲ್ಲಿ ಅವರು ಸಿಗ್ಮಂಡ್ ಫ್ರಾಯ್ಡನ ಮನೋವಿಶ್ಲೇಷಕ ವಿಧಾನಗಳನ್ನು ಶೆಲ್-ಆಘಾತದಿಂದ ಬಳಲಿತ್ತಿರುವ ಸೈನಿಕರಿಗೆ ಬಳಸಿದರು. ಆಗ ಫ್ರಾಯ್ಡನ ಸಿದ್ಧಾಂತಗಳು ಸರ್ರಿಯಲಿಸಂ ಪಂಥದ ಉಗಮಕ್ಕೆ ಕಾರಣವಾದವು.

ಇಪ್ಪತ್ತನೆಯ ಶತಮಾನದಲ್ಲಿ ವಿಶೇಷವಾಗಿ ಕಾಣಿಸಿಕೊಂಡ ಹೊಸ ಪ್ರವೃತ್ತಿಯನ್ನು ಸೂಚಿಸುವ ಕಲಾಪಂಥಗಳಲ್ಲಿ ಸರ್ರಿಲಿಯಸಂ ಪಂಥ ಮುಖ್ಯವಾದದು. ಕಲಾವಿದನ ಊಹಾ ವಿಲಾಸಕ್ಕೆ, ವಿಚಾರಸರಣಿ, ಕನಸುಗಾರಿಕೆ ಮತ್ತು ಸುಪ್ತ ಭಾವನೆಗಳಿಗೆ ಇಲ್ಲಿ ಅವಕಾಶವಿದೆ. ಬುದ್ಧಿ ಪ್ರಚೋದಿತವಾದ ಅಥವಾ ಕೇವಲ ಸಾಂಪ್ರದಾಯಿಕವಾದ ವಿಚಾರಗಳನ್ನು ಅವಾಸ್ತವಿಕ ವಾತಾವರಣದಲ್ಲಿ ತಂದಿಟ್ಟು, ತೋರಿಸಿ, ಚಕಿತಗೊಳಿಸಬಹುದು. ವಿಚಾರಕ್ಕೆ ಗುರಿ ಮಾಡಬಹುದು. ಮಾನವನ ವಾಸ್ತವಿಕ ಅವಯವಗಳನ್ನು ಅವಾಸ್ತವಿಕವೂ ಭೀತಿಕಾರವೂ ಆಗಿ ತೋರಿಸಿರುವ ವಿಕೃತಿಗಳು ಸರ್ರಿಯಸಂ ಪಂಥದ ಹಿನ್ನಲೆಯಲ್ಲಿ ಚಿತ್ರಕಾರನ ವ್ಯಕ್ತಿಗತ ಮನೋಧರ್ಮಕ್ಕೆ ಸಂಬಂಧಿಸಿರುತ್ತದೆ. ಕಲ್ಪನೆ ಮತ್ತು ಊಹೆಗಳಿಗೆ ಅದು ಸಂಬಂಧಪಟ್ಟಂತೆಯೆ ಅವರವರ ಸುಪ್ತ ಮನಸ್ಸಿಗೂ ಸಂಬಂಧಪಟ್ಟಿರುತ್ತದೆ.

ಪ್ರಖ್ಯಾತ ಮನಶಾಸ್ತ್ರಜ್ಞ ಸಿಗ್ಮಂಡ್ ಫ್ರಾಯ್ಡ ಈ ಕ್ಷೇತ್ರದಲ್ಲಿ ಸಾಕಷ್ಟು ಕೆಲಸ ಮಾಡಿರುವರು. ಸರ್‍ರಿಯಲಿಸಂ ಪಂಥ ಈ ಶತಮಾನದ ಅತ್ಯಂತ ಮಹತ್ವದ ಚಳುವಳಿಗಳಲ್ಲಿ ಒಂದಾಗಿದ್ದು ಕಲಾವಿದರು, ಶಿಲ್ಪಿಗಳು, ಲೇಖಕರು, ಚಲನಚಿತ್ರ ಕಲಾವಿದರು ಸಮಾನ ಮನೋಭಾವದಿಂದ ಪರಿಭಾಪಿಸಿದ ವಿಶ್ವವೊಂದರ ಪರಿಶೋಧನೆಯನ್ನು ಪ್ರತಿಷ್ಠಾಪಿಸಲು ಪ್ರಯತ್ನಿಸಿತು'(ಶಿವರಾಮ್ ಕಾರಂತ, ಕಲಾಪ್ರಪಂಚ, ಪುಟ, ೪೦೯-೪೧೦).

The term 'surrealism' was first used by the poet Apollinaire in 1917 to suggest a heightened sonse of realism, but in paris in the mid 1920s it came to designate a new art movement, whose influence was widespread and lasting'(mike o'mahony, world Art, page -44).

ಮನಸ್ಸನ್ನು ಇಂದಿನ ಪರಂಪರೆ ರೂಢಿಯಲ್ಲಿದ್ದ ಶಿಸ್ತು, ದೃಷ್ಟಿ, ನಿಯಮ ಹಲವಾರು ಪದ್ಧತಿಗಳಿಂದ ದೂರ ಇಟ್ಟು ಅದೇ ಸ್ವತಂತ್ರವಾಗಿ ಸ್ವಚ್ಛವಾಗಿ ತಮ್ಮದೆ ಆದ ಅಗಾಧ ಅದ್ಭುತವಾಗಿದೆ ನಾವು ಅಂದುಕೊಂಡ ಹಾಗೆ ಪ್ರಪಂಚವನ್ನು ರೂಪಿಸಿಕೊಳ್ಳಲು ಅನುಕೂಲ ಮಾಡುವುದು ಅದು ಸತ್ಯತೆಗೂ ಸರಿಸಾಟಿಯಲ್ಲದ ಜಗತ್ತು ಅಂದು ಸರ್‍ರಿಯಲಿಸಂ ಪಂಥ ಎಂದು ಹೆಸರಿಟ್ಟು ಘೋಷಿಸಿದ್ದರು. ಕಲೆಯೂ ಸಂಪ್ರದಾಯದ ಒಂದು ಅಂಗ, ತನ್ನದೇ ಆದ ಒಂದು ಪ್ರಪಂಚದ ಮನಸ್ಸಿನ ಮನಃಶಾಸ್ತ್ರದ ಸೀಮೆಗೆ ತಂದು ಅವನ ಮನಸ್ಸಿನ ಅನುಭವ ಅದರಲ್ಲಿಯೂ ಮನಸ್ಸಿಗೂ ಆಂತರಿಕವಾದ ಅನುಭವವನ್ನು ತಾವು ರಚಿಸುವ ಚಿತ್ರ ಕಲಾ ಕೃತಿಗಳಲ್ಲಿ ತೋರಿಸುತ್ತಿದ್ದರು. ಅದು ಹೊರಗಿನ ಜಗತ್ತಿಗೆ ಒಂದು ವಿಚಿತ್ರವಾದ ಹೊಸ ಅನುಭವ ಯಾರಿಗಾದರೂ ಕೂಡ ಈ ವಿಷಯ ಜನರಿಗೆ ಬಿಸಿ ಮುಟ್ಟುವ ರೀತಿಯದ್ದು. ಆ ಚಿತ್ರ ಕಲಾಕೃತಿಗಳ ವಸ್ತುಗಳು ಊಹಾತೀತವಾದದ್ದು. ವಾಸ್ತವಕ್ಕಿಂತ ಒಂದು ಉನ್ಮಾದ ಅಥವಾ ಕನಸಿನ ಬಯಲಿಗೆ ಸೇರಿಸಿದ್ದವು. ಕುತೂಹಲ, ವಿಸ್ಮಯ, ಭಯ ಉಂಟುಮಾಡುವಂತಹ ಈ ರೀತಿಯ ವಿಷಯಗಳಾಗಲಿ ಅಥವಾ ಈಗ ಜಗತ್ತಿನಲ್ಲಿ ನಡೆಯುತ್ತಿರುವ ಯಾವುದೆ ದೃಶ್ಯವಾಗಲಿ ಅಥವಾ ನಾವು ಅಂದುಕೊಂಡ ಹಾಗೆ ಚಿತ್ರಿಸಬಹುದು ಮತ್ತು ಉನ್ಮಾದದ ವಸ್ತು ಹಾಗೂ ಸರ್‍ರಿಯಲಿಸಂನಲ್ಲಿ ವಸ್ತುವಿನ ಭಾವಗಳನ್ನು ಅನೇಕ ಕಲಾಕೃತಿಗಳಲ್ಲಿ ಕಾಣಬಹುದು.

ಸರ್‍ರಿಯಲಿಸಂ ಪಂಥದಲ್ಲಿ ಅತಿ ಪ್ರಾಮುಖ್ಯವಾದ ಕಲಾವಿದರು ಜಾರ್ಜಿಯೋಡಿಕಿರಿಕೋ, ಸಾಲ್ವರ ಡಾಲಿ, ಮಾರ್ಸಲ್ ಡೂಷಾ, ಟಂಗ್ವೇ, ಮೀರಾ, ಆರ್ಫ್, ಮಾರ್ಕ್‌ಷೆಗಲ್, ಮುಂತಾದ ಕಲಾವಿದರು ರಚಿಸಿದ ಚಿತ್ರಕಲಾ ಕೃತಿಗಳು ನೋಡುಗರ ಕಣ್ಣಿಗೆ ಸರಿ ಎನಿಸಿದ್ದರೂ ಕೂಡ ಅವರ ವಿಚಾರ ಹಾಗೂ ಅವರ ಚಿತ್ರಗಳಲ್ಲಿ ಮಾಡುವ ನವ್ಯ ಕೈಚಳಕ ರೀತಿ–ನೀತಿ ಮತ್ತು ಅವರ ಹೊಸ ರೀತಿಯ ಪದ್ಧತಿ ಮತ್ತೊಬ್ಬ ಕಲಾವಿದನಿಗೆ ಆಶ್ಚರ್ಯವುಂಟು ಮಾಡುವದೆಂದು ಹೇಳಲಾಗುವುದು.

ಸರ್‍ರಿಯಲಿಸಂ ಸದಾಕಾಲ ಅಂತರಾಷ್ಟ್ರೀಯ ರೂಪುರೇಷೆ ಹೊಂದಿದ್ದರೂ ಕೂಡ, ಅದರ

ಮೊದಲ ಬೆಳವಣಿಗೆ ಆದದ್ದು ಪ್ಯಾರಿಸಿನಲ್ಲಿ. ಅದು ಒಂದು ಉಪತಂಡವಾಗಿ ಆಮೇಲೆ ೧೯೨೫ರ ನಂತರ ಬ್ರುಸಿಲ್ಸಲ್ಲಿ ಬೇರೆ ಬೇರೆ ಸರ್ರಿಯಲಿಸಂ ತಂಡಗಳು ಹುಟ್ಟಿದ್ದು ಮತ್ತು ಅದರ ತತ್ವಗಳು ಎಲ್ಲೆಡೆ ಪ್ರಸಾರವಾದುದು ೧೯೩೦ರ ದಶಕದಲ್ಲಿ ಇದಕ್ಕೆ ಕಾರಣ ಆಗ ನ್ಯೂಯಾರ್ಕ್, ಲಂಡನ್, ಟೋಕಿಯೋ, ಕೋಪನ್ ಹೇಗನ್, ಟೆನರಿಟ್ ಮತ್ತಿತರ ನಗರಗಳಲ್ಲಿ ನಡೆದ ಕಲಾಪ್ರದರ್ಶನಗಳು. ಬ್ರಿಟನ್‌ನ ಮೊದಲ "ಮ್ಯಾನಿಫೆಸ್ಟೋ ಆಫ್ ಸರ್ರಿಯಲಿಸಂ" ಪುಸ್ತಕದ (೧೯೨೪) ಅಡಿ ಟಿಪ್ಪಣಿಯಲ್ಲಿ ಕಲೆಯ ಬಗ್ಗೆ ಉಲ್ಲೇಖಗೊಂಡಿದ್ದರೂ ಕೂಡ ಅದು ಬಹಳ ಬೇಗ ಸರ್ರಿಯಲಿಸಂ ಭಾವನೆಗಳನ್ನು ವ್ಯಕ್ತಪಡಿಸಲು ಕೇಂದ್ರ ಬಿಂದುವಾಯಿತು. ೧೯೨೮ರಲ್ಲಿ ಬ್ರಿಟನ್‌ನ ಪ್ರಮುಖ ಪ್ರಬಂಧ "ಸರ್ರಿಯಲಿಸಂ ಮತ್ತು ಚಿತ್ರರಚನೆ" ಪ್ರಕಟವಾಯಿತು. ಸರ್ರಿಯಲಿಸ್ಟ್ ಕಲಾ ಚಳುವಳಿಯಲ್ಲಿ ಒಂದಲ್ಲ ಒಂದು ಬಾರಿ ಭಾಗವಹಿಸಿದ ಕಲಾವಿದರಲ್ಲಿ ಹಳೆಯ 'ದಾದಾ'ಗಳಾಗಿದ್ದ ಜೀನ್ ಆರ್ಪ್, ವ್ಯಾನ್‌ರೆ, ಫ್ರಾನ್ಸಿಸ್ ಪಿಕಾಬಿಯ ಮತ್ತು ಮ್ಯಾರ್ಕ್ಸ್ ಅರ್ನೆಸ್ಟ್ ಸೇರಿದ್ದರು. ಇವರ ಜೊತೆ ಮ್ಯಾಸನ್ ಜಾನ್ ಮಿರೋ, ಟಂಗ್ವೆ, ಮ್ಯಾಗ್ರಿಟ್, ಗಿಯಾಕೊಮಿತಿ, ಸಾಲ್ವಡಾರ್ ಡಾಲಿ, ಬ್ರಾನರ್, ಬೆಲ್ಮರ್, ಡೋಮಿನಿಗೆಸ್, ಮಟ್ಟಿ ಮತ್ತು ಲ್ಯಾಮ್ ಕೂಡ ಸೇರಿದ್ದರು. ಪಿಕಾಸೋ ಮತ್ತು ಡುಶ್ಯಾಂಪ್ ಸರ್ರಿಯಲಿಸಂ ಪ್ರಮುಖ ಅಂಶಗಳು ಮೂಲ ದಾದಾಯಿಸಂನಲ್ಲಿದ್ದರೂ ಕೂಡ, ಅದರ ಒತ್ತು ಬೇರೆಯೆ ಆಗಿತ್ತು. ಮಹಾನ್ ಕಲಾವಿದರ ಮತ್ತು ಕಲೆಯ ಅತ್ಯಂತ ಗೌರವಯುತ ಕಾಲಗಳನ್ನು ಶಪಿಸುವುದರಲ್ಲಿ ಅಥವಾ ತಮಾಷೆ ಮಾಡುವುದರಲ್ಲಿ ದಾದಾಗಳು ತೃಪ್ತಿಪಟ್ಟುಕೊಳುತ್ತಿದ್ದರು. ಆದರೆ ಸರ್ರಿಯಲಿಸ್ಟ್ ಕಲಾವಿದರು Classical traditions of the ideal of truth to nature ಮತ್ತು ಕಲೆಗಾಗಿ ಕಲೆ ಎಂಬ ನೀತಿಯನ್ನು (ಈ ಕಾರಣಕ್ಕಾಗಿ ಅಮೂರ್ತ ಕಲೆಯನ್ನು ಅವರು ಟೀಕಿಸುತ್ತಿದ್ದರು) ಸಕಾರಣಗಳಿಂದ ಮತ್ತು ಗಂಭೀರವಾಗಿ ಟೀಕಿಸುತ್ತಿದ್ದರು. ಇದರ ಜೊತೆ ಅವರಿಗೆ ಅತ್ಯಂತ ಪ್ರಿಯ ಮತ್ತು ಆಪ್ತವಾಗಿದ್ದ ಇನ್ನೊಂದು ಕಲಾಪರಂಪರೆಗೆ ಜನರ ಗಮನವನ್ನು ಹರಿಸಲು ಯತ್ನಿಸಿದರು. ಈ ಕಲಾಪರಂಪರೆಯನ್ನು ಕಲಾ ಇತಿಹಾಸಕಾರರು ಮತ್ತು ಕಲಾ ತಜ್ಞರು ಕಡೆಗಣಿಸಿದ್ದರು. ಜನರ ಅಭಿರುಚಿಯನ್ನು ಸಂಪೂರ್ಣವಾಗಿ ಬದಲಾಯಿಸಲು ಮತ್ತು ಸರ್ರಿಯಲಿಸಂ ಭಾವನೆಗಳು ಮೊದಲಿನಿಂದಲೂ ಮನುಷ್ಯನ ಜಾಗೃತ ಭಾವನೆಯ ಒಂದು ಪ್ರಮುಖ ಭಾಗವಾಗಿತ್ತು ಎಂದು ತೋರಿಸುವ ಉದ್ದೇಶದಿಂದ ಅವರು ಯಾವ ಮುಚ್ಚು ಮರೆಯಿಲ್ಲದೆ ತಮ್ಮ ಕಲೆಯ ವಿವಿಧ ಮತ್ತು ವೈವಿಧ್ಯಮಯ ಮೂಲಗಳನ್ನು ಒಪ್ಪಿಕೊಳ್ಳುತ್ತಿದ್ದರು. ಇವರಲ್ಲಿ ಪ್ರಮುಖರಾಗಿದ್ದವರೆಂದರೆ ಫ್ಯಾಂಟಸಿ ಕಲಾವಿದರಾಗಿದ್ದ ಬೋಷ್ (Bosch), ಉಚೆಲ್ಲೋ (Uccello) ಮತ್ತು ಆರ್ಕಿಂಬೊಲ್ಡೊ (Arcimboldo), ರೊಮ್ಯಾಂಟಿಕ್ ಮತ್ತು ಸಿಂಬಾಲಿಸ್ಟ್ ಕಲಾವಿದರು ಮತ್ತು ಲೇಖಕರಾಗಿದ್ದ ರಿಂಬಾಡ್ (Rimbaud), ಲಾಟ್ರೆಮಾಂಟ್ (Lautreamont), ಗೋಯಾ (Goya), ಮೋರೆ (Moreau), ಒಡಿಲಾನ್ ರೆಡಾನ್ (Redon), ಸೂರತ್ (Seurat), ಗಾಗಿನ್ (Gaugin), ಮತ್ತು ಹೆನ್ರಿರೂಸೋ (Rousseau) ನಂಥ

ನಿಷ್ಕಪಟ ಕಲಾವಿದರುಗಳು(ಮರಿಶಾಮಾಚಾರ್ ಎನ್., ಸರ್ರಿಯಲಿಸಂ, ಪುಟ ೬-೭).

ಇದಲ್ಲದೆ ಅಸ್ವಸ್ಥ ಮನಸ್ಸಿನವರ ಕಲೆ, ಮಕ್ಕಳ ಕಲೆ, ಫೆಸಿಫಿಕ್ ನಡುಗಡ್ಡೆಗಳ, ಎಸ್ಕೋಮೋಗಳ ಹಾಗೂ ಅಮೇರಿಕನ್ ಇಂಡಿಯನ್ ಪ್ರಾಚೀನ ಜನಾಂಗಗಳ ಕಲೆ ಮತ್ತು ಪಿಕ್ಚರ್ ಪೋಸ್ಟ ಕಾರ್ಡಗಳು ಹಾಗೂ ಮೂಕಿ ಹಾಸ್ಯ ಚಿತ್ರಗಳಲ್ಲಿ ಕಂಡು ಬರುತ್ತಿದ್ದ ವಿಚಿತ್ರವಾದ ಜನಪ್ರಿಯ ಕಲೆಯ ಸ್ವರೂಪಗಳು ಸೇರಿದ್ದವು. ಇವುಗಳ ಜೊತೆಗೆ ಸಿಗ್ಮಂಡ್ ಫ್ರಾಯ್ಡ್‌ನ ಬರಹಗಳು, ಅದರಲ್ಲೂ "ದಿ ಇಂಟರ್‌ಪ್ರಿಟೇಷನ್ ಆಫ್ ಡ್ರೀಮ್ಸ್" ೧೯೨೦ರ ದಶಕದಲ್ಲಿ ಸರ್ರಿಯಲಿಸಂನ ಬೆಳವಣಿಗೆಗೆ ಪ್ರಮುಖ ಕಾರಣವಾಗಿದ್ದವು ಎಂದು ಹೇಳಲಾಗಿದೆ. ದಾದಾ ಚಿತ್ರಗಳನ್ನು ಬಿಟ್ಟರೆ ಅತ್ಯಂತ ಹತ್ತಿರದ ದೃಶ್ಯ ಮೂಲಗಳೆಂದರೆ ಪಿಕಾಸೊನ ಕೆಲವು ಕ್ಯೂಬಿಸ್ಟ್ ಚಿತ್ರಗಳು, ದಾದಾದಿಂದ ಹೊರಗಿರುವ ಡೂಶ್ಯಾಮಪ್‌ನ ಚಿತ್ರಗಳು ಮತ್ತು ಡಿ ಚಿರಿಕೊನ ಮೆಟಫಿಸಿಕಲ್ ಚಿತ್ರಗಳು, ದಾದಾದಿಂದ ಮುಕ್ತವಾದ ನಂತರದ ಎರಡು ವರ್ಷ ಕಾಲ (೧೯೨೨-೨೪) ಸಿಗ್ಮಂಡ್ ಫ್ರಾಯ್ಡನ ಪುಸ್ತಕಗಳನ್ನು ಆಧರಿಸಿದ ಕನಸುಗಳ ಅರ್ಥೈಸುವಿಕೆ ಮತ್ತು ಆಟೋಮ್ಯಾಟಿಸಂಗಳ ಬಗ್ಗೆ ತೀವ್ರವಾದ ಪ್ರಯೋಗಗಳನ್ನು ನಡೆಸಿದರು. ಈ ಅವಧಿಗೆ ಟ್ರಾನ್ಸಸ್ ಅವಧಿ ಎಂಬ ಹೆಸರು ಬಂದಿತು. ಅಕ್ಟೋಬರ್ ೧೯೨೪ರಲ್ಲಿ ಪ್ರಕಟವಾದ ಮೊದಲ ಮ್ಯಾನಿಫೆಸ್ಟೋದಲ್ಲಿ ಈ ಗುಂಪಿನ ಮೇಲೆ ತಿಳಿಸಿದ ಚಟುವಟಿಕೆಗಳು, ಸಿದ್ಧಾಂತಗಳು ಮತ್ತು ಉದ್ದೇಶಗಳನ್ನು ಸಂಗ್ರಹಿಸಲಾಗಿದೆ. ಈ ಪುಸ್ತಕದಲ್ಲಿ ಆಂಡ್ರೆ ಬ್ರೆತಾನ್ ಬಹಳ ಶ್ರೇಷ್ಠಮಟ್ಟದಲ್ಲಿ ಸರ್ರಿಯಲಿಸಂನ್ನು ಈ ಕೆಳಗೆ ತಿಳಿಸಿದಂತೆ ವ್ಯಾಖ್ಯೆ ಮಾಡಿದ್ದಾನೆ.

ಭಾವನೆಗಳು ನಿಜವಾಗಿ ನಡೆಯುವ ರೀತಿಯನ್ನು ಒಬ್ಬ ವ್ಯಕ್ತಿ, ಶುದ್ಧ, ಅನಿಯಂತ್ರಿತ ಮನಸಿನ ಶಕ್ತಿಯ ಮೂಲಕ ವ್ಯಕ್ತಪಡಿಸುವ ರೀತಿ, ಚಿಂತನಶಕ್ತಿಯ ಮೂಲಕ ವ್ಯಕ್ತಪಡಿಸುವ ರೀತಿ, ಚಿಂತನಶಕ್ತಿಯ ಯಾವುದೇ ಹಿಡಿತವಿಲ್ಲದೆ, ಸೌಂದರ್ಯದ ಅಥವಾ ನೈತಿಕ ಹೊಣೆಗಾರಿಕೆಗಳಿಂದ ಸಂಪೂರ್ಣ ಮುಕ್ತವಾಗಿ ಅಪ್ರಜ್ಞ ಭಾವನೆಯೊಂದರಿಂದಲೆ ನಿರ್ದೇಶಿತವಾಗಿ, ಉತ್ತಮ ಮಟ್ಟದವು ಎಂದು ನಂಬಿಕೆಗಿಡಾಗಿರುವ ಈ ಹಿಂದೆ ಕಡೆಗಣೀಸಿರುವ ಕೆಲವು ಮಾನಸಿಕ ಸಂಬಂಧಗಳು, ಕನಸುಗಳ ಸರ್ವವ್ಯಾಪ್ತಿ ಶಕ್ತಿ ಮತ್ತು ನಿರಾಶಕ್ತಿ ಭಾವನೆಗಳ ಮೇಲೆ ಸರ್ರಿಯಲಿಸಂ ಅವಲಂಬಿಸಿದೆ.

ಅರೆ ನಿದ್ರಾಸ್ಥಿತಿಯನ್ನು ತಲುಪಿದರೆ, ಹೊರ ಜಗತ್ತನ್ನು ಅಳಿಸಿ ಹಾಕಿ, ಚಿಂತನ ಶಕ್ತಿಯ ಅಡೆತಡೆಗಳಿಲ್ಲದೆ, ಶ್ರೇಷ್ಠ ಮಟ್ಟದ ನೈಜತೆಯ ಅದ್ಭುತ ಲೋಕದಲ್ಲಿ ನೆಲೆಸಬಹುದು. ಕನಸಿನ ಲೋಕಕ್ಕೆ ಸಮವಾದ ಈ ಲೋಕ ನಮ್ಮ ಎಚ್ಚರಿತ ಮನಸ್ಸಿಗೆ ಎಂದೂ ದಕ್ಕುವುದಿಲ್ಲ ಎಂಬುದನ್ನು ಸರ್ರಿಯಲಿಸ್ಟ್‌ಗಳು ಕಂಡುಕೊಂಡರು. ಮಾತು, ಬರಹ, ಕಲೆ, ಚಿತ್ರ, ಪುಸ್ತಕ ಎಲ್ಲವೂ ಕೂಡ, ಅನಿಯಂತ್ರಿತ ಅಭಿವ್ಯಕ್ತಿಯಂತೆ, ಊಹಾ ಸ್ವಾತಂತ್ರ್ಯದಲ್ಲಿ ಅಸಮಾನ. ಇದುವರೆಗೂ ಮುಚ್ಚಿಟ್ಟಿದ್ದ ಇಂಥ ಜೀವನದ ಸೈಕಿಕ್ ಅದ್ಭುತಗಳು ಯಾವುದೆ ಅತಿಮಾನಸ ಶಕ್ತಿಗೆ ಸೇರಬೇಕಾಗಿದ್ದಿಲ್ಲ. ಇವು ನಿಜವಾದ ಸಮಗ್ರ ವ್ಯಕ್ತಿತ್ವದ ವ್ಯಕ್ತಿಗಳಲ್ಲಿ ಕಂಡುಬರುವ ಸಹಜಶಕ್ತಿ. ಇಲ್ಲಿಂದ ಮುಂದೆ ಮ್ಯಾನಿಫೆಸ್ಟೊದ ಪ್ರಕಾರ ಸರ್ರಿಯಲಿಸಂ ಅಂತಿಮ ಗುರಿ "ಕನಸು ಮತ್ತು ವಾಸ್ತವಿಕತೆ". ಒಂದಕ್ಕೊಂದು

ತದ್ವಿರುದ್ಧ ಎಂಬಂತೆ ಕಾಣುವ ಈ ಎರಡೂ ಲೋಕಗಳು ಸಂಪೂರ್ಣ ವಾಸ್ತವಿಕತೆ ಅಥವಾ ಸರ್‍ರಿಯಲಿಸಂ ಆಗಿ ಸಮ್ಮಿಲನಗೊಳ್ಳುವುದು. ಎಚ್ಚರದ ಮನಸ್ಸಿನ ಅನುಭವಕ್ಕೆ ಸದಾಕಾಲ ಬರುವ ಅರ್ಥರಹಿತ ಭಾವನೆಗಳು ಮತ್ತು ಚಿತ್ರಗಳು (ಗೋಚರಕ್ಕೆ ಸಿಕ್ಕುವ ನೈಜಲೋಕದ ಜಗತ್ತೆಲ್ಲ) ಕ್ರಿಯಾತ್ಮಕ ಅಭಿವ್ಯಕ್ತಿಗೆ ಸೂಕ್ತ ವಿಷಯಗಳು ಮತ್ತು ಅವೆ ಇದಕ್ಕೆ ಮೂಲ-ಎಂದು ನಿರ್ಧರಿಸಲಾಯಿತು. ಬ್ರಿಟನ್‌ನ ಸೌಂದರ್ಯದ ಸ್ಪಷ್ಟರೂಪತೆಯು ಈ ಭಾವನೆಗಳಿಂದಲೆ ಹುಟ್ಟಿದ್ದು ಆತನ ಪ್ರಕಾರ "ಅದ್ಭುತವಾದದ್ದು ಸದಾ ಸುಂದರವಾಗಿರುತ್ತದೆ, ಅದ್ಭುತವಾದ ಯಾವುದೇ ವಸ್ತು ಸುಂದರವಾಗಿರುತ್ತದೆ".

ಮ್ಯಾನಿಫೆಸ್ಟೋದಲ್ಲಿ ಚಿತ್ರಕಲೆಯನ್ನು ಉಪೇಕ್ಷಿಸಿದರೂ ಕೂಡ, ೧೯೨೪ರಲ್ಲೇ ಸರ್‍ರಿಯಲಿಸ್ಟ್ ಕಲೆ ಅಸ್ತಿತ್ವದಲ್ಲಿತ್ತು. ೧೯೨೩-೨೪ರ ಚಳಿಗಾಲದಲ್ಲಿ ಆಂಡ್ರೆ ಮ್ಯಾಸನ್, ಬ್ರೆಟನ್‌ನನ್ನು ಸ್ವಲ್ಪ ಹಿಂದೆ ಭೇಟಿ ಮಾಡಿದ್ದು, ಆತನ ಪ್ರಯೋಗಗಳ ಬಗ್ಗೆ ತಿಳಿದುಕೊಂಡಿದ್ದರಿಂದ, ತನ್ನ ಮೊದಲ ಆಟೋಮ್ಯಾಟಿಕ್ ಚಿತ್ರಗಳನ್ನು ರಚಿಸಿದ. ಹಾಳೆಯ ಮೇಲೆ ತನ್ನ ಲೇಖನಿಯನ್ನು ಯಾವ ನಿಯಂತ್ರಣವೂ ಇಲ್ಲದೆ ಹರಿಯಬಿಟ್ಟು, ವಿಷಯ ಮತ್ತು ರಚನೆಗಳ ಪದ್ಧತಿಯಿಂದ ಮುಕ್ತನಾಗಿ ತನ್ನ ಮನಸ್ಸಿನ ಅಂತರಾಳದಲ್ಲಿ ಹುದುಗಿದ್ದ ಅದ್ಭುತ ಚಿತ್ರಗಳಿಗೆ ಆತ ಬಿಡುಗಡೆ ನೀಡಿದ. ಅವನ ಈ ಆಟೋಮ್ಯಾಟಿಕ್ ಚಿತ್ರಗಳು ಈ ರೀತಿಯಲ್ಲಿ ಮನಸ್ಸಿಗೆ ಸಮಾನವಾದ ದೃಶ್ಯರೂಪಗಳಾದವು. ೧೯೨೩ ರಲ್ಲಿ ಚಿರಿಕೊ ರಚಿಸಿದ ವುಮನ್, ಓಲ್ಡ್‌ಮ್ಯಾನ್ ಮತ್ತು ಫ್ಲವರ್ ಎಂಬ ಚಿತ್ರಗಳು ಅವನ ಕನಸುಗಳ ಮತ್ತು ಫ್ಯಾಂಟಸಿಗಳ ವಿವರಣಾತ್ಮಕ ಸತ್ಯರೂಪಗಳು ನಂತರ ಸರ್‍ರಿಯಲಿಸ್ಟ್ ಚಿತ್ರ ೧೯೨೩-೨೪ ರಷ್ಟು ಹಿಂದೆಯೇ ಮ್ಯಾಸನ್ ಮತ್ತು ಅರ್ನಸ್ಟ್ ವಿವರಿಸಿದ ಹಾಗೆ ಎರಡು ರೀತಿಯಲ್ಲಿ ವಿಂಗಡಣೆಗೊಂಡವು:

೧. ಹೆಚ್ಚು ಅಮೂರ್ತವಾದ, ತಡೆರಹಿತವಾಗಿ ಹೊರಬಂದ ಆಟೋಮ್ಯಾಟಿಕ್ ಚಿತ್ರಗಳು.

೨. ಭ್ರಮಾಧೀನವಾದ ಜಾಗರೂಕವಾಗಿ ರಚಿತಗೊಂಡ ಅರ್ಥರಹಿತ ಕನಸಿನ ರೂಪಗಳು ಅತಿ ಅದ್ಭುತವಾದ ಆಕಾರಗಳಿಂದ ಕೂಡಿದೆ. ಅತಿ ಸೂಕ್ಷ್ಮ ವಿವರಗಳಿಂದ ತುಂಬಿದ ಹಲವು ಚಿತ್ರಗಳ ಮೂಲಕ ಜಾನ್ ಮಿರೊ ೧೯೨೩ರಲ್ಲಿ ಸರ್‍ರಿಯಲಿಸಂಗೆ ಬದಲಾವಣೆಗೊಂಡವು. ಈ ಶೈಲಿಯ ದೃಷ್ಟಿಯಿಂದ ಅವನ ಚಿತ್ರಗಳು ಮೇಲೆ ತಿಳಿಸಿದ ಎರಡೂ ರೀತಿಗಳಲ್ಲಿವೆ.

ಮೊದಲ ಮ್ಯಾನಿಫೆಸ್ಟೊದಲ್ಲಿ ಆಟೋಮ್ಯಾಟಿಸಂಗೆ ಕೊಟ್ಟ ಪ್ರಾಮುಖ್ಯತೆಯು ಸರ್‍ರಿಯಲಿಸಂ ಚಿತ್ರಕಲೆಯ ಮೇಲೆ ಮುಂದಿನ ಕೆಲವು ವರ್ಷಗಳಲ್ಲಿ ತುಂಬಾ ಆಳವಾದ ಪರಿಣಾಮ ಬೀರಿದವು. ಮೇಸನ್‌ನ ರೇಖಾಚಿತ್ರಗಳ ಮುಕ್ತ ರೇಖೆಗಳು ಆತನ ತೈಲ ಚಿತ್ರಗಳ ಮುಕ್ತರೂಪದ ರೂಪುರೇಷೆಗಳನ್ನೂ ಒಳಗೊಂಡಿದ್ದವು. ಆದರೆ ಅವುಗಳ ಪೂರ್ಣತೆಯಲ್ಲಿ ಪ್ರಯತ್ನದ ಅಂಶ ಸ್ಪಷ್ಟವಾಗಿದೆ. ಆಟೋಮ್ಯಾಟಿಸಂ ಚಿತ್ರಗಳ ರಚನೆಯನ್ನು ಮುಂದುವರೆಸಲು ೧೯೨೭ರಲ್ಲಿ ಆತ ಮರಳು ಚಿತ್ರಗಳ ಸರಣಿಯನ್ನು ಪ್ರಾರಂಭಿಸಿದ. ಉದಾಹರಣೆಗೆ : ಮೀನುಗಳ ಯುದ್ಧ. ಈ ಚಿತ್ರ ಕ್ಯಾನ್ವಾಸ್ ಮೇಲೆ ಅಂಟನ್ನು ಅಲ್ಲಿ, ಇಲ್ಲಿ ಬಳಿದು ಅದರ ಮೇಲೆ ಕೈ ತುಂಬಾ ಮರಳನ್ನು ಎಸೆದು, ಅದಕ್ಕೊಂದು ರೂಪ ಮತ್ತು ಚೌಕಟ್ಟನ್ನು ಕೊಡಲಾಗಿದ್ದು, ನಂತರ ಅದಕ್ಕೆ ಬಣ್ಣ ಮತ್ತು ರೇಖೆಗಳನ್ನು

ಅನಿರ್ಬಂಧಿತವಾಗಿ ರಚಿಸಲಾಗಿದೆ.

೧೯೨೫ರಲ್ಲಿ ಅರ್ನೆಸ್ಟ್ ಹೊಸ ಆಟೋಮ್ಯಾಟಿಕ್‌ನ್ನು ವಿಧಾನಗಳನ್ನು ಮುಂದುವರೆಸಿದರು. ಉಜ್ಜುವಿಕೆಯಿಂದ ರೇಖಾಚಿತ್ರಗಳೂ ಮತ್ತು ಕೊರೆಯುವಿಕೆದಿಂದ ಚಿತ್ರಕಲೆಯನ್ನು ರಚಿಸಿದರು ಮಕ್ಕಳು ನಾಣ್ಯಗಳ ಮೇಲೆ ಹಾಳೆಯನ್ನು ಇಟ್ಟು ಉಜ್ಜುವ ರೀತಿಯಲ್ಲೇ ಆತ ಮರ, ಎಲೆಗಳು ಮತ್ತಿತರ ಹಲವಾರು ವಸ್ತುಗಳನ್ನು ಉಜ್ಜುವಿಕೆಗೆ ಉಪಯೋಗಿಸಿ, ಅವುಗಳನ್ನು ಸೂಕ್ಷ್ಮವಾದ ಮತ್ತು ಹಲವು ಭಾವನೆಗಳನ್ನು ಹೊಮ್ಮಿಸುವ ಹಕ್ಕಿಗಳ, ಮರಗಳ, ಹಾರುವ ರಾಕ್ಷಸರ ಮತ್ತಿತರ ಚಿತ್ರಗಳಾಗುವಂತೆ ಜೋಡಿಸಿದ. ೧೯೨೬ರಲ್ಲಿ ಆತನ ಉಜ್ಜು ಚಿತ್ರಗಳು 'ಹಿಸ್ಟರಿ ನ್ಯಾಚುರಲ್' ಎನ್ನುವ ಹೆಸರಿನ ಪುಸ್ತಕದಲ್ಲಿ ಪ್ರಕಟವಾದವು. ಆತನ ಕೂರೆತದ ಚಿತ್ರಗಳಾದ ಡೋವ್ಸ್, ಹೋರ್ಡ್ಸ್, ಫಾರೆಸ್ಟ್ಸ್, ಸ್ನೋಫ್ಲವರ್ಸ್ ಮುಂತಾದವು ೧೯೨೫-೨೮ರಲ್ಲಿನ ಅವರ ಹಿಂದಿನ ಭ್ರಾಂತಿಯ ಚಿತ್ರಗಳಿಗೆ ಹೋಲಿಸಿದರೆ ಅತ್ಯಂತ ಭಿನ್ನವಾಗಿವೆ. ಈ ವಿಧಾನದಲ್ಲಿ ಕ್ಯಾನ್ವಾಸ್ ಮೇಲೆ ಒಂದರ ಮೇಲೆ ಒಂದರಂತೆ ಬಣ್ಣಗಳನ್ನು ಹಲವಾರು ಬಾರಿ ಬಳಿಯಲಾಗುತ್ತದೆ. ನಂತರ ಅದರ ಬಳಿ ಕೆಲವು ವಸ್ತುಗಳನ್ನಿಟ್ಟು ಉಬ್ಬಿದ ಭಾಗಗಳನ್ನು ಉಜ್ಜಲಾಗುವುದು ಮುಂದೆ ಅದರಲ್ಲಿ ಹೊಮ್ಮುವ ರೂಪಗಳನ್ನು ಅರ್ಥೈಸಲಾಗುತ್ತದೆ.

೧೯೨೫ರ ಮಿರೊನ ಹಲವಾರು ಚಿತ್ರಗಳು ಅತ್ಯಂತ ವೇಗವಾಗಿ ಮತ್ತು ಮುಕ್ತವಾಗಿ ರಚಿಸಲ್ಪಟ್ಟ ಆಟೋಮ್ಯಾಟಿಕ್ ಚಿತ್ರಗಳಾಗಿವೆ. ಉದಾಹರಣೆಗೆ: 'ದಿ ಬರ್ತ ಆಫ್ ದಿ ವರ್ಲ್ಡ್' ಚಿತ್ರ ಅತ್ಯಂತ ಅಮೂರ್ತವಾಗಿರುವ ಈ ಸರಣಿ ಚಿತ್ರಗಳು ತಮ್ಮ ಕಾವ್ಯಮಯ ಶೀರ್ಷಿಕೆಗಳಿಂದ ನೈಜ ಜಗತ್ತಿನ ನೆನಪನ್ನು ತರುತ್ತವೆ. ೧೯೨೩ ರಲ್ಲಿ ಕಲೆಯ ಮಾರಾಟದ ಅಂಗಡಿಯೊಂದರ ಕಿಟಕಿಯಲ್ಲಿ ಡಿ ಚಿರಿಕೋನ ಚಿತ್ರವೊಂದನ್ನು ನೋಡಿದ ತಕ್ಷಣ ಪ್ರಭಾವಿತನಾಗಿ ಯೂಸ್ ಟಂಗ್ವೆ ಚಿತ್ರಕಾರನಾಗಲು ನಿರ್ಧರಿಸಿದ. ಆತನ ಮೊದಲ ಚಿತ್ರಗಳು ಡಿ ಚಿರಿಕೋನ ಮನಸ್ಸು ಕಾಡುವ ದೃಶ್ಯಗಳನ್ನು ನೆನಪಿಗೆ ತಂದರೂ ಕೂಡ, ಅವುಗಳ ಒಗಟಿನಂತಹ ಅಮೂರ್ತತೆ ಮತ್ತು ಬಯೋಮಾರ್ಫಿಕ್ ರೂಪಗಳಿಂದಾಗಿ ಆ ಚಿತ್ರಗಳ ಮೇಲೆ ಮಿರೋ ಮತ್ತು ಆರ್ಪರ್ ಪ್ರಭಾವವನ್ನು ಕಾಣಬಹುದು ಎನ್ನಲಾಗಿದೆ.

ಸರ್‍ರಿಯಲಿಸ್ಟ್ ಚಿತ್ರಕಾರರು ಸಾಮೂಹಿಕ ಚಟುವಟಿಕೆಗಳಲ್ಲಿ ಪ್ರತಿಯೊಬ್ಬರೂ ಚಿತ್ರ ರಚಿಸಬೇಕು ಎನ್ನುವುದರ ಬಗ್ಗೆ ಆಸಕ್ತಿ ತೋರಿದರು. ಇದರ ಪರಿಣಾಮವೇ "ಕ್ಯಾಡವರ್ ಎಕ್ಸ್‌ವಿಸ್" ಎಂಬ ಒಂದು ರೀತಿಯ ಆಟ. ಒಂದು ವಾಕ್ಯ ಅಥವಾ ನಾಲ್ಕು ಜನರಿಂದ ರಚಿತವಾಗುತ್ತಿತ್ತು. ಒಬ್ಬರ ಹಿಂದಿನವರ ರಚನೆಯ ಅರಿವಿಲ್ಲದೆ, ಇವುಗಳನ್ನು ಮುಂದುವರೆಸುತ್ತಿದ್ದರು. ಇದರ ಪರಿಣಾಮವಾಗಿ ಅತ್ಯಂತ ಅದ್ಭುತ ಕಲ್ಪನೆಗಳು ಸೃಷ್ಟಿಯಾದವು. ಇವು ನಿಸ್ಸಂಶಯವಾಗಿಯೂ ಸರ್‍ರಿಯಲಿಸ್ಟ್ ಸೌಂದರ್ಯೋಪಾಸನೆಯ ಸೂತ್ರಗಳನ್ನು ಸಂಪೂರ್ಣವಾಗಿ ಅರ್ಥೈಸಿದ್ದವು. ಸರ್‍ರಿಯಲಿಸ್ಟರ ಧ್ಯೇಯ ಮೂಲ ಚಿತ್ರಣ ಕಾವ್ಯವಾಗಿತ್ತು. ಕವಿಗಳು ಮತ್ತು ಕಲಾವಿದರು ಜೊತೆಗೂಡಿ ರಚಿಸಿದ ಎಕ್ಸ್‌ಕ್ವಿಸ್ಟ್ ಕಾರ್ಪ್ಸ್‌ನಲ್ಲಿ ಈ ಧ್ಯೇಯವನ್ನು ಕಾಣಬಹುದು. ಸ್ಪಷ್ಟ ಚಿತ್ರಣಗಳುಳ್ಳ ಸರ್‍ರಿಯಲಿಸ್ಟ್ ಕವನಗಳಲ್ಲಿ

ಚಿತ್ರಗಳಿಗೆ ಅರ್ಥಗರ್ಭಿತ ಕಾವ್ಯಮಯ ಶೀರ್ಷಿಕೆಗಳನ್ನು ಕೊಟ್ಟು ಎಲ್ಲ ಕಲಾವಿದರಲ್ಲಿ, ಅರ್ನೆಸ್ಟ್ ಮತ್ತು ಮಿರೊನ ಕೆಲವು ಚಿತ್ರಗಳಲ್ಲಿ ಅವರು ಅಳವಡಿಸಿರುವ ಪದಗಳಲ್ಲಿ ಮತ್ತು ನುಡಿಗಟ್ಟುಗಳಲ್ಲಿ ಮತ್ತು ಚಿತ್ರಕಾರರು ತಮ್ಮ ಚಿತ್ರಗಳಲ್ಲಿ ತೋರುತ್ತಿದ್ದ ಪ್ರಾಸ್ತಾವಿಕ ಮತ್ತು ರೂಪಾಂತರ ಗುಣಗಳಲ್ಲಿ ಕೂಡ ಸರ್‍ರಿಯಲಿಸ್ಟರ ಧ್ಯೇಯವನ್ನು ಕಾಣಬಹುದಾಗಿತ್ತು.

೧೯೨೮-೨೯ರ ಸಮಯದಲ್ಲಿ ಡಿ ಚಿರಿಕೊ ಮತ್ತು ೧೯೨೦ರ ಆರಂಭದಲ್ಲಿ ಅರ್ನೆಸ್ಟ್, ಅಟೋಮ್ಯಾಟಿಕ್ ಚಿತ್ರರಚನೆಯ ವಿಧಾನವನ್ನು ಬಿಟ್ಟು, ಇಲ್ಯೂಷನಿಸ್ಟಿಕ್ ಭ್ರಮಾತ್ಮಕ ಚಿತ್ರಗಳನ್ನು ರಚಿಸತೊಡಗಿದರು. ಇದಕ್ಕೆ ಕಾರಣ ಬ್ರಿಟನ್‌ನ ಎರಡನೆಯ ಸರ್‍ರಿಯಲಿಸ್ಟ್ ಮ್ಯಾನಿಫೆಸ್ಟೊ, ಆತನ ಪ್ರಕಾರ ಆಟೋಮ್ಯಾಟಿಕ್ ಚಿತ್ರಗಳು ಕೇವಲ ಸೌಂದರ್ಯಪೂರ್ಣ ಚಿತ್ರಗಳ ಇಳಿ ಬಿಡುವ ಬರುವ ಅಪಾಯವಿತ್ತು. ಕನಸುಗಳೂ, ಫ್ಯಾಂಟಸಿ ಮತ್ತು ಸರ್‍ರಿಯಲಿಸ್ಟ್ ಕಲ್ಪನೆಗಳನ್ನು ನೇರವಾಗಿ ಸ್ಪಷ್ಟವಾಗಿ, ಇಲ್ಯೂಷನಿಸ್ಟಿಕ್ ವಿವರಣೆಯ ಮೂಲಕ ತೋರಿಸಬಹುದು ಎಂಬ ಅಭಿಪ್ರಾಯ ಆಗ ಬಂದಿತ್ತು. ಮಿರೋ ಕೂಡ ವಿವರಣಾತ್ಮಕವಾದ ಮತ್ತು ರೇಖಾ ಮಾದರಿಯ ಚಿತ್ರಗಳನ್ನು ರಚಿಸತೊಡಗಿದ ಅವುಗಳಲ್ಲಿ ಮೊದಲಿನ ಅನಿರ್ಬಂಧಿತ ಭಾವನೆಗಳು ಇದ್ದರೂ ಕೂಡ, ಅವು ಘಟನೆಗಳಿಂದ ತುಂಬಿದ್ದವು. ಉದಾಹರಣೆ : ಮಲದ ರಾಶಿಯ ಮುಂದೆ ಗಂಡು ಮತ್ತು ಹೆಣ್ಣು ಎಂಬ ಚಿತ್ರದಲ್ಲಿ ಅಸ್ವಸ್ಥತೆಯ ಜಂಜಾಟ, ಹಿಂಸೆ, ರತಿಕಾಮನೆ ಮತ್ತು ಹಾಸ್ಯ ತುಂಬಿಕೊಂಡಿದ್ದವು.

ಮ್ಯಾಕ್ಸ್ ಅರ್ನೆಸ್ಟ ಚಿತ್ರಗಳೂ ಕೂಡ ಹೆಚ್ಚು ಸೃಷ್ಟಿಗೊಳ್ಳುತ್ತಾ ಬಂದಿತು. ೧೯೨೯ ರಲ್ಲಿ ಆತನ ಕೊಲಾಜ್ ಕಾದಂಬರಿಗಳ ಮೊದಲ ಕೃತಿ ಪ್ರಕಟವಾಯಿತು. ಅದರ ಹೆಸರು "ನೂರು ತಲೆಗಳ ಹೆಂಗಸರು". ಈ ಚಿತ್ರಗಳು ಜನಪ್ರಿಯ ಪತ್ರಿಕೆಗಳಲ್ಲಿ ಪ್ರಕಟವಾದ ಚಿತ್ರಗಳನ್ನೂ ಕತ್ತರಿಸಿ ಮಾಡಿದ್ದಾಗಿದ್ದವು. ಆತ ಈ ಚಿತ್ರಗಳನ್ನು ಅತಿ ಅಪೂರ್ವ ರೀತಿಯಲ್ಲಿ ಜೋಡಿಸಿ ಅದ್ಬುತ, ತಳಮಳಗೊಳ್ಳುವ ಅಥವಾ ಹಾಸ್ಯದೃಶ್ಯಗಳನ್ನಾಗಿ ಪರಿವರ್ತಿಸಿದರು. ಟಂಗ್ಯೆ ಮೊದಲ ಚಿತ್ರಗಳಲ್ಲಿನ ಬೈಯೋಮಾರ್ಫಿಸಮ್ ಮುಂದುವರಿದು ಇನ್ನೂ ಅಸ್ಪಷ್ಟವಾಗಿದ್ದುದರ ಜೊತೆಗೆ ಹೊರ ಜಗತ್ತಿನ ಯಾವುದೇ ಕುರುಹು ಇಲ್ಲದಂತೆ ಅಳಿಸಿ ಹಾಕಲ್ಪಟ್ಟವು. ಆದರೂ ೧೯೨೯ರ ನಂತರ ಆತನ ಕೃತಿಗಳಲ್ಲಿ ಹೆಚ್ಚು ಸ್ಪಷ್ಟತೆ ಮತ್ತು ಹೆಚ್ಚಿನ ಶ್ರಮವನ್ನು ಕಾಣಬಹುದು. ಕೊನೆಯೇ ಇಲ್ಲ ಎನ್ನುವಷ್ಟು ವೈಶಾಲ್ಯವನ್ನು ಕಾಣುವ ಆತನ ಚಿತ್ರಗಳಲ್ಲಿ ಬೈಯೋಮಾರ್ಫಿಕ್ ರೂಪಗಳು ತುಂಬಿಕೊಂಡಿದ್ದವು. ಈ ರೂಪಗಳು ಹೆಚ್ಚು ಸ್ಪಷ್ಟವಾಗಿ ತ್ರಿ-ಪ್ರಮಾಣ ರೂಪವನ್ನು ಪಡೆದವು. ಆತನ ಊಹಾ ಅಥವಾ ಕನಸಿನ ಲೋಕದ ಪ್ರತಿಕೃತಿಗಳೆ ಎಂಬಂತೆ ಆ ಚಿತ್ರಗಳಿದ್ದವು.

೧೯೨೭ರಲ್ಲಿ ರೀನ್ ಮ್ಯಾಗ್ರಿಟ್ ಪ್ಯಾರಿಸ್‌ಗೆ ಬಂದು ನೆಲೆಸಿದ. ಆತ ಬ್ರಸಲ್ಸ್‌ನ ಸರ್‍ರಿಯಲಿಸ್ಟ್ ತಂಡದ ಸ್ಥಾಪಕರನು ಸದಸ್ಯರಲ್ಲಿ ಒಬ್ಬನಾಗಿದ್ದ. ಆತನ ಚಿತ್ರಗಳೆಲ್ಲ ನಿಖರ ಸ್ಪಷ್ಟ ನೈಜ ಶೈಲಿಯಲ್ಲಿವೆ. ಆತನು ಚಿತ್ರಿಸಿದ ಘಟನೆಗಳಲ್ಲಿನ ಮನೋಭಾವ ಮತ್ತು ಬಾಹ್ಯ ವಿಷಯಗಳಿಗೆ ಆಘಾತ ಮತ್ತು ತಲ್ಲಣವನ್ನು ತರುತ್ತವೆ. ಉದಾಹರಣೆಗೆ: ೧೯೨೮ರಲ್ಲಿ ಪ್ರೇಮಿಗಳು ಎಂಬ ಕೃತಿಯಲ್ಲಿ ಒಂದು

ಗಂಡು ಮತ್ತು ಹೆಣ್ಣು ಒಬ್ಬರನ್ನೊಬ್ಬರು ಚುಂಬಿಸುತ್ತಿದಾರೆ. ಆದರೆ ಅವರ ತಲೆಗಳು ಬಟ್ಟೆಗಳಿಂದ ಸುತ್ತಲ್ಪಟ್ಟಿವೆ. ತಮ್ಮ ಹಲವಾರು ಚಿತ್ರಗಳಲ್ಲಿ ಅವರು ಪ್ರಕೃತಿಯ ಬಗ್ಗೆ ನಮಗೆ ಇರುವ ಅರಿವನ್ನು ಪ್ರಶ್ನಿಸುತ್ತಾನೆ. ಅವರ ಪ್ರಕಾರ ಅರಾಜಕತೆಯ ಶಕ್ತಿಗಳು ಗೌಪ್ಯವಾಗಿ ಸೃಷ್ಟಿಯನ್ನು ನಿಯಂತ್ರಿಸುತ್ತವೆ. ಉದಾಹರಣೆಗೆ: ಭಾಷೆಯ ಮೇಲಿನ ನಮ್ಮ ನಂಬಿಕೆಯನ್ನು ಮತ್ತು ಕಲೆ ಸೃಷ್ಟಿಯನ್ನು ಅನುಕರಿಸುತ್ತದೆ ಎಂಬ ಹೇಳಿಕೆಯನ್ನು ಅವರು ೧೯೨೯ರಲ್ಲಿ 'ಟ್ರೀಸನ್ ಆಫ್ ಇಮೇಜಸ್' ನಲ್ಲಿ ಬಲವಾಗಿ ಪ್ರಶ್ನಿಸುತ್ತಾರೆ. ಅದರಲ್ಲಿ ಪೈಪ್ ನಕಲು ಚಿತ್ರದ ಕೆಳಗೆ ಈ ಬರಹ ಇದೆ. ಇದು ಪೈಪ್ ಅಲ್ಲ ಎಂದು ಹೇಳಲಾಗುತ್ತದೆ.

ಸಾಲ್ವರ್ ಡಾಲಿ ೧೯೨೮ರ ಕೊನೆಯಲ್ಲಿ ತನ್ನ ಜೊತೆಗಾರ ಲೂಯಿ ಬನೆಲ್ ನೊಡನೆ ಸರ್ರಿಯಲಿಸ್ಟ್ ಪ್ರೇರಿತ "ಎನ್ ಅಂಡಾಲುಸಿಯನ್ ಡಾಗ್" ಎಂಬ ಚಲನಚಿತ್ರವನ್ನು ನಿರ್ಮಿಸುವ ಮೂಲಕ ಸರ್ರಿಯಲಿಸಂ ಲೋಕವನ್ನು ಪ್ರವೇಶಿಸಿದ. ಈ ಚಿತ್ರವನ್ನು ಪ್ಯಾರಿಸ್‌ನಲ್ಲಿ ಖಾಸಗಿಯಾಗಿ ಪ್ರದರ್ಶಿಸಲಾಯಿತು. ೧೯೨೮ ಮತ್ತು ೧೯೨೯ರಲ್ಲಿ ಸರ್ರಿಯಲಿಸಂ ಚಳುವಳಿಯಲ್ಲಿ ಸಾಕಷ್ಟು ಆಂತರಿಕ ಸಮಸ್ಯೆಗಳು ಮತ್ತು ಘರ್ಷಣೆಗಳು ಕಾಣಿಸಿಕೊಂಡವು. ಇದಕ್ಕೆ ಎರಡು ಕಾರಣಗಳು ಒಂದು ಕಮ್ಯೂನಿಸ್ಟ್ ಪಕ್ಷದೊಡನೆ ಸರ್ರಿಯಲಿಸಂ ಸಂಬಂಧ, ಎರಡು ಸರ್ರಿಯಲಿಸ್ಟ್ ತತ್ವಗಳ ಬಗ್ಗೆ ಬ್ರೆತಾನ್ ತೋರುತ್ತಿದ್ದ ಸರ್ವಾಧಿಕಾರಿ ಮನೋಭಾವ. ಸರ್ರಿಯಲಿಸಂ ತತ್ವಗಳಿಂದ ಸರಿಯುತ್ತಿದ್ದವರನ್ನೂ ಉಚ್ಚಾಟಿಸಲೂ ಆತ ಹಿಂದೆ ಮುಂದೆ ನೋಡುತ್ತಿರಲಿಲ್ಲ. ಬ್ರೆಟನ್ ಬಗ್ಗೆ ಆದರು ಕೂಡ ನಂಬಿಕೆ ಇಟ್ಟವರು ಡಾಲಿ. ಬ್ರೆಟನ್‌ಗೆ ಅವಶಕ್ಯವಾಗಿ ಬೇಕಾಗಿದ್ದ ಸೂಕ್ತ ಬೆಂಬಲವಾಗಿದ್ದರು. ಡಾಲಿಯ 'ದಿ ಲಗ್‌ಬ್ರುಯಸ್ ಗೇಮ್' ಮತ್ತು ಚಿತ್ರಗಳಲ್ಲಿನ ವಿಪರೀತ ಲೈಂಗಿಕ ದೃಶ್ಯಗಳು ಬ್ರೆಟನ್‌ನ ಸರ್ರಿಯಲಿಸ್ಟ್ ಗುರಿಯ ಪೂರ್ಣ ಪ್ರತೀಕಗಳಾಗಿದ್ದವು. ಬ್ರೆಟನ್ ತಮ್ಮ 'ಎರಡನೇ ಸರ್ರಿಯಲಿಸ್ಟ್ ಮ್ಯಾನಿಫೆಸ್ಟೋದಲ್ಲಿ' ಸರ್ರಿಯಲಿಸ್ಟ್ ಗುರಿ ಏನು ಎಂದು ಹೀಗೆ ಹೇಳುತ್ತಾರೆ. "ನಮ್ಮೊಳಗೆ ನಾವು ಅದ್ಭುತವಾದ ರಮ್ಯತೆಯಿಂದ ಇಳಿಯುವ, ಮುಚ್ಚಿ ಅವಿತಿರುವ ಭಾಗಗಳ ಮೇಲೆ ವ್ಯವಸ್ಥಿತವಾಗಿ ಬೆಳಕನ್ನು ಚೆಲ್ಲುವ ಮತ್ತು ನಿರ್ಬಂಧಿತ ಪ್ರದೇಶಕ್ಕೆ ಸದಾ ಪ್ರವೇಶಿಸುವ ಮೂಲಕ ನಮ್ಮ ಸೈಕಿಕ್ ಶಕ್ತಿಯನ್ನು ಪುನಃ ಪಡೆಯುವುದನ್ನು." ಡಾಲಿ ತಮ್ಮ ಡಬಲ್ ಇಮೇಜ್‌ಸ್ ಎಂದು ಕರೆದರು. ೧೯೩೦ರ ದಶಕದಲ್ಲಿ ಪ್ರಭಾವಶಾಲಿಯಾದ ಈ ಮಾದರಿ ಸರ್ರಿಯಲಿಸ್ಟ್ ಚಿತ್ರಕ್ಕೆ ಫ್ರಾಯ್ಡ್‌ನ ಕಲ್ಪನೆಗಳು ಲೇಪನಗಳಾದವು ಎಂದರೆ ತಪ್ಪಗಲಾರದು. ಆದರೆ ಫ್ಯಾಸಿಸಂ ಬಗ್ಗೆ ಅವರಿಗಿದ್ದ ಕಳಕಳಿ ಮತ್ತು ಹಣಗಳಿಕೆಯಲ್ಲಿ ಅವರಿಗಿದ್ದ ಆಸಕ್ತಿಯಿಂದ, ಮುಂದೆ ಸರ್ರಿಯಲಿಸ್ಟ್ ಗುಂಪಿನಿಂದ ಹೊರಗೆ ಬರಬೇಕಾದ ಪರಿಸ್ಥಿತಿಗೆ ಬಂದರು.

೧೯೨೯ರಲ್ಲಿ ಆಲ್ಬರ್ಟೊ ಗಿಯೊಕೊಮಿಟಿ ಎಂಬ ಶಿಲ್ಪಿಯು ಸರ್ರಿಯಲಿಸಂ ಹಾದಿಯನ್ನು ತುಳಿಯತೊಡಗಿದರು. ಮುಂದಿನ ಆರು ವರ್ಷ ಅವರು ತಮ್ಮ ಊಹಾಲೋಕದ ಸಹಾಯದಿಂದಲೆ ಶಿಲ್ಪಗಳನ್ನು ರಚಿಸಿದರು. ಪಂಜರದಂಥ ಆಕೃತಿಗಳು, ಅವುಗಳೊಳಗೆ ಕಷ್ಟ ಅರ್ಥದ ವಸ್ತುಗಳ,

ಕರುಳಿನ ಆಕಾರದ ಪ್ಲಾಸ್ಟರನ ಕಾರಿಡಾರ್‌ಗಳ ಮಣೆ ಆಟಗಳನ್ನು ಹೋಲುವ ಜೀವಿಗಳ ಮೂಲಕ, ಅವರು ಭಯಕ್ಕೆ ವಿನಾಕಾರಣ ಶಿಕ್ಷೆಯ ಬಗ್ಗೆ ಮತ್ತು ತಲ್ಲಣಗೊಳಿಸುವ ಹಿಂಸೆಗಳಿಗೆ ಹೊಸರೂಪಗಳನ್ನು ಕೊಟ್ಟರು. ಮುಂದೆ ಸ್ವಲ್ಪ ಸಂಪ್ರದಾಯ ರೀತಿಯ ಸ್ತ್ರೀ ಶಿಲ್ಪಗಳಿಗೆ ಅವರು ಮೋಹಿನಿಯ ಹೋಲಿಕೆಯನ್ನು ಕೊಟ್ಟಿರುವರು.

೧೯೩೦ರ ದಶಕದಲ್ಲಿ ವಸ್ತುಗಳನ್ನು ಮಾಡುವ ಹೊಸ ಚಟುವಟಿಕೆಗಳಿಗೆ ಸರ್ರಿಯಲಿಸ್ಟರಲ್ಲಿ ಪ್ರಮುಖವಾಯಿತು. ಈ ವಸ್ತುಗಳನ್ನು ತಯಾರಿಸುವುದಕ್ಕೆ ಯಾವ ವಿಶೇಷ ಪರಿಣತಿಯು ಬೇಕಾಗಿರಲಿಲ್ಲ. ೧೯೨೪ ರಷ್ಟೇ ಹಿಂದೆಯೇ ಬ್ರೆತನ್ "ಕನಸಿನಲ್ಲಿ ಮಾತ್ರ ಕಾಣಲು ಸಾಧ್ಯವಾಗುವಂತಹ ಕೆಲವು ವಸ್ತುಗಳನ್ನು ಸೃಷ್ಟಿಸಬೇಕೆಂದು ರಚಿಸಿದರು. ವಸ್ತುಗಳನ್ನು ಅವುಗಳ ಉಪಯೋಗಗಳಿಂದ ಬಿಡುಗಡೆಗೊಳಿಸುವ ಉದ್ದೇಶದಿಂದ ಮತ್ತು ಆಸೆಗಳನ್ನು ವಸ್ತುಗಳನ್ನಾಗಿ ಪರಿವರ್ತಿಸುವ ಗುರಿಯಿಂದ ಈ ವಸ್ತುಗಳನ್ನು ಮಾಡಲಾಗುತ್ತಿತ್ತು. ಮನಸ್ಸನ್ನು ಆಕರ್ಷಿಸಿದ ಯಾವುದೇ ಪದಾರ್ಥದಿಂದ ಅಂತರ ಮನಸ್ಸಿನ ಕಾರ್ಯಾಚರಣೆಯಿಂದ ಈ ವಸ್ತುಗಳ ರಚನೆ ಆಗುತ್ತಿತ್ತು. ಕೆಲವು ಬಾರಿ ವಿಪರೀತ ವಿವರಣಾತ್ಮಕವಾದ, ಕೆಲವೊಮ್ಮೆ ಕಾವ್ಯವನ್ನು ಉಪಯೋಗಿಸಿಕೊಂಡ ಈ ವಸ್ತುಗಳು ಸರ್ರಿಯಲಿಸ್ಟರ ವೈಯಕ್ತಿಕ ಶ್ರದ್ಧಾ ದೈವವಾಗಿದ್ದವು. ಮೆರೆಟ್ ಆ ಪನ್ ಹೀಮ್‌ನ ಫರ್ ಕವರ್ಡ ಕಪ್, ಸಾಸರ್ ಅಂಡ್ ಸ್ಪೂನ್ ಅವುಗಳಲ್ಲಿ ಅತ್ಯಂತ ಪ್ರಮುಖವಾದ ಕೃತಿಗಳಲ್ಲಿ ಒಂದು. ಈ ವಿಶೇಷ ವಸ್ತುಗಳ ಶೋಧನೆ ಆಯ್ಕೆ ಮತ್ತು ಅವುಗಳ ತಯಾರಿಕೆ ೧೯೩೬ರಲ್ಲಿ ಪ್ಯಾರಿಸ್‌ನ ಗ್ಯಾಲರಿ ಚಾರ್ಲ್ಸ್ ರ್‍ಯಾಟನ್ನಲ್ಲಿ ನಡೆದ ಸರ್ರಿಯಲಿಸ್ಟ್ ವಸ್ತುಗಳ ಪ್ರದರ್ಶನದ ಮೂಲಕ ತನ್ನ ಅತ್ಯುನ್ನತ ಶಿಖರವನ್ನು ಮುಟ್ಟಿತು.

೧೯೨೦ರ ದಶಕದಲ್ಲಿ ಮೆರೆದ ಸಾಕಷ್ಟು ಯಶಸ್ಸನ್ನು ಪಡೆದ ಸರ್ರಿಯಲಿಸಂ ಅದರಲ್ಲೂ ಸರ್ರಿಯಲಿಸ್ಟ್ ಚಿತ್ರಕಲೆ ೧೯೩೦ರ ದಶಕದಲ್ಲಿ ತನ್ನ ಸಾಹಸ ಮತ್ತು ಧೈರ್ಯವನ್ನು ಕಳೆದುಕೊಳ್ಳಲಾರಂಭಿಸಿತು. ಹೊಸದಾಗಿ ಸರ್ರಿಯಲಿಸಂಗೆ ಸೇರ್ಪಡೆಯಾದವರು ಹಳಬರ ಸಮಾನರಾಗಿರಲಿಲ್ಲ. ವಿಕ್ಟರ್ ಬ್ರಾನರ್ ಎಂಬ ರುಮೇನಿಯಾ ದೇಶದ ಕಲಾವಿದರು ೧೯೩೨ರಲ್ಲಿ ಸರ್ರಿಯಲಿಸ್ಟ್ ಗುಂಪನ್ನು ಸೇರಿದರು. ಅವರು ಆಕ್ರಮಣಕಾರಿ ರೀತಿಯ ಲೈಂಗಿಕ ದೃಶ್ಯಗಳ ರಾಕ್ಷಸ ರೀತಿಯ ಜನಗಳಿಂದ ತುಂಬಿದ ಭಯಾನಕ ಚಿತ್ರಗಳನ್ನು ರಚಿಸುವುದರ ಮೂಲಕ ಇಲ್ಯೂಷನಿಸ್ಟ್ ರೀತಿಯಲ್ಲಿ ತಮ್ಮದೇ ಆದ ಮೈಥಾಲಜಿಯನ್ನು ಸೃಷ್ಟಿಸಿದರು.

೧೯೩೭ ಅಥವಾ ೧೯೩೮ರ ವರೆಗೆ ಜರ್ಮನ್ ಕಲಾವಿದರು ಹ್ಯಾನ್ಸ್ ಬೆಲ್ಮರ್ ಪ್ಯಾರಿಸ್‌ಗೆ ಬರದೆ ಇದ್ದರೂ ಕೂಡ ಅವರ ಡಾಲ್ ಕೃತಿಗಳು ೧೯೩೫ರಲ್ಲಿ ಮಿನಾಟರ್‌ನಲ್ಲಿ ಪ್ರಕಟವಾದವು. ಪ್ರಚೋದಕ ಕೋನಗಳಿಂದ ಲೈಂಗಿಕವಾಗಿ ಪ್ರಚೋದಕ ಭಂಗಿಗಳಿಂದ ತುಂಬಿದ ಆ ಚಿತ್ರದಲ್ಲಿ ಹೆಣ್ಣಿನ ಅಂಗಾಂಗಗಳನ್ನು ಅವರು ಅತ್ಯಂತ ಭಯಾನಕ, ವಿಚಿತ್ರ ರೀತಿಯಲ್ಲಿ ಪುನರ್ ಜೋಡಣೆ ಮಾಡಿದರು. ಬೆಲ್ಮರರ ಈ ಚಿತ್ರ ಸರ್ರಿಯಲಿಸಂಗೆ ಸ್ವಯಂ ಲೈಂಗಿಕ ಹಿಂಸೆಯ ಬಗ್ಗೆ ಇದ್ದ ಆಸಕ್ತಿಯ ಅದ್ಭುತ ಉಪಮೆಯಾಗಿದೆ. ಆಸ್ಕರ್ ಡಾ. ಮಿಂಗೆಜ್ ಹಲವಾರು ಗಮನ ಸೆಳೆಯುವ

ವಸ್ತುಗಳನ್ನು ಸೃಷ್ಟಿಸಿದರು. ಟೆನರಿಪ್‌ನ ಈತ ೧೯೩೬ರಲ್ಲಿ ಮಕ್ಕಳ ಕಲೆ ಡೆಕಲ್‌ಕೊಮೇನಿಯ ಮಾದರಿಯನ್ನು ಉಪಯೋಗಿಸಿದ. ಒಂದು ಹಾಳೆಯ ಮೇಲೆ ಬಣ್ಣವನ್ನು ಹರಡಿ, ಅದರ ಮೇಲೆ ಇನ್ನೊಂದು ಹಾಳೆಯನ್ನಿಟ್ಟು ಒತ್ತಿ, ಆ ಹಾಳೆಯನ್ನು ತೆಗೆದು ಅವರು ಇದ್ದಕ್ಕಿದ್ದಂತೆ ವಿಚಿತ್ರ ಪ್ರಕೃತಿ ಚಿತ್ರಗಳನ್ನು ಮತ್ತು ಅದ್ಬುತ ನೈಸರ್ಗಿಕ ವನ್ಯ ಸಂಪತ್ತನ್ನು. ಅರ್ನೆಸ್ಟ್ ಎರಡನೇ ಮಹಾಯುದ್ಧದ ಸಮಯದಲ್ಲಿ ಇದೇ ಮಾದರಿಯನ್ನು ಉಪಯೋಗಿಸಿ ಅದ್ಭುತ ಪರಿಣಾಮಕಾರಿ ಚಿತ್ರಗಳನ್ನು ಸೃಷ್ಟಿಸಿದರು.

೧೯೩೦ರ ನಂತರ ಪಾಲ್ ಡೆಲ್ವಾಕ್ಸ್ ಸರ್‌ರಿಯಲಿಸ್ಟ್ ಪ್ರೇರಿತ ಇಲ್ಯೂಷನಿಸ್ಟ್ ಚಿತ್ರಗಳನ್ನು ರಚಿಸಿದರು. ಅವರ ಚಿತ್ರಗಳಲ್ಲಿ ಬಯಸುವ, ಆದರೆ ಹತ್ತಿರ ಹೋಗಲಾರದಂತ ಬೆತ್ತಲೆ ಹೆಣ್ಣುಗಳು ಮತ್ತು ಹೆದರುವ ಅಪ್ರಯೋಜಕ ಗಂಡಸರು ಇದ್ದಾರೆ. ಈ ಚಿತ್ರಗಳು ಈಡೇರದ ಲೈಂಗಿಕ ಬಯಕೆಗಳನ್ನು ಮತ್ತು ಅದುಮಿಟ್ಟ ಲೈಂಗಿಕತೆಯನ್ನು ಹೇಗೆ ತೋರುತ್ತವೆ ಎಂದರೆ ಅವು ಫ್ಯಾಂಟಸಿ ಮತ್ತು ಕದ್ದು ನೋಡುವ ಲೈಂಗಿಕ ಚಟುವಟಿಕೆಗಳಲ್ಲಿ ಮಾತ್ರ ಹೊರಕ್ಕೆ ಬರುವಂತಹವುಗಳಾಗಿವೆ.

೧೯೩೯ರ ಮಹಾಯುದ್ಧದ ಪ್ರಾರಂಭದಿಂದ ಪ್ಯಾರಿಸನ್ ಕಲಾ ಜಗತ್ತಿಗೆ ತೊಂದರೆಗಳಾಗಿ ಸರ್‌ರಿಯಲಿಸ್ಟ್ ತಂಡದಲ್ಲಿ ಒಡಕು ಉಂಟಾಯಿತು. ಕೆಲವು ಸರ್‌ರಿಯಲಿಸ್ಟರು ನ್ಯೂಯಾರ್ಕನಲ್ಲಿ ಆಶ್ರಯ ಪಡೆದು, ಬ್ರೆಟನ್ ಜೊತೆಗೂಡಿ ಹೊಸ ತಂಡವನ್ನು ಕಟ್ಟಿದರು. ೧೯೪೨ ರಲ್ಲಿ ಸರ್‌ರಿಯಲಿಸಂಗೆ ಸಂಬಂಧಿಸಿದಂತೆ ವಿ.ವಿ.ವಿ ಎಂಬ ಪತ್ರಿಕೆಯನ್ನು ಆರಂಭಿಸಿತು. ಬ್ರೆಟನ್ ಮತ್ತು ಅರ್ನೆಸ್ಟ್ ಈ ಪತ್ರಿಕೆಯ ಸಂಪಾದಕೀಯ ಸಲಹೆಗಾರರಾಗಿದ್ದರು. ರಾಬರ್ಟೋ ಮಟ್ಟಯಕಾರೆನ್ ಮತ್ತು ವಿಫ್ರೆಡೊ ಲ್ಯಾಮ್ ಆ ಸಮಯದಲ್ಲಿ ತಂಡವನ್ನು ಸೇರಿದವರಲ್ಲಿ ಪ್ರಮುಖರಾಗಿದ್ದರು. ಆಟೋಮ್ಯಾಟಿಸ್ಟ್ ಮಾದರಿಯಲ್ಲಿ ಶ್ರೀಮಂತ ಬಣ್ಣಗಳ ಮತ್ತು ಧ್ವನಿಯ ವೈರುಧ್ಯಗಳ ಮೂಲಕ ಮಾತ್ರ ರೋಚಕ ಮತ್ತು ಕಾವ್ಯಾತ್ಮಕ ಚಿತ್ರಗಳನ್ನು ಕೆಲಕಾಲ ರಚಿಸಿದರು. ನಂತರ ರೇಖೆಗಳನ್ನು ಉಪಯೋಗಿಸಿ ವೈಜ್ಞಾನಿಕ ಕಥೆಗಳಲ್ಲಿ ಬರುವಂತಹ ಪಾತ್ರಗಳನ್ನು ತಮ್ಮ ಕೃತಿಗಳಲ್ಲಿ ರಚಿಸಿದರು. ಇದರ ಪರಿಣಾಮವಾಗಿ ಆ ಚಿತ್ರಗಳಲ್ಲಿ ಹೆಚ್ಚು ಒರಟುತನ ಕಾಣಿಸಿಕೊಂಡವು.

ಲ್ಯಾಮ್‌ನರ ಕೃತಿಗಳಲ್ಲಿ ಕ್ರಮಬದ್ಧತೆ ಮತ್ತು ಪಿಕಾಸೊ ಬಗ್ಗೆ ಅವರಿಗಿದ್ದ ತೀವ್ರ ಅಭಿಮಾನದ ಪ್ರೇರಣೆಯನ್ನು ಕಾಣಬಹುದು. ಆಫ್ರಿಕಾದ ಬುಡಕಟ್ಟು ಜನಾಂಗಗಳ ಶಿಲ್ಪಗಳ ಪರಿಣಾಮವನ್ನು ಅವರ ಕೃತಿಗಳಲ್ಲಿ ಕಾಣಬಹುದು. ಆದರೆ ಅವರ ರೂಪಗಳು ಉಷ್ಣವಲಯದ ದಟ್ಟ ಗಿಡಗಳ ನಡುವೆ ನಡೆಯುವ ಆದಿಕಾಲದ ಪ್ರಕ್ರಿಯೆಗಳನ್ನು ನೆನಪಿಗೆ ತರುತ್ತವೆ. ಇದೇ ಸಮಯದಲ್ಲಿ ಸರ್‌ರಿಯಲಿಸ್ಟ್ ಆಟೋಮ್ಯಾಟಿಸ್ಟ್ ಅಮೇರಿಕದ ಯುವ ಕಲಾವಿದರ ಮೇಲೆ ಸಾಕಷ್ಟು ಪ್ರಭಾವವನ್ನು ಬೀರಿತು. ಆರ್ಷಿಲ್‌ಗಾರ್ಕಿಗೆ ಬ್ರೆತಾನ್‌ನ ಸಂಪೂರ್ಣ ಬೆಂಬಲವಿತ್ತು. ಸರ್‌ರಿಯಲಿಸ್ಟ್ ಮಾದರಿಗಳಿಗೆ ಮಿರೊ ಮತ್ತು ಮ್ಯಾಸನ್ ಕೃತಿಗಳಿಗೆ ಹಾಗೂ ಪಿಕಸೋವಿನಿಂದ ಪ್ರೇರಿತ ಸರ್‌ರಿಯಲ್ ಚಿತ್ರಗಳಿಗೆ ಇತರ ಕಲಾವಿದರಾದ ಮದರ್‌ವೆಲ್ ಡಿ ಕ್ರೂನಿಂಗ್ ಸ್ಟಿಲ್, ರೊತ್ಕೊ ಮತ್ತು ಜಾಕಸನ್ ಪೋಲಾಕ್ ಅವರು ಬಹಳ ಋಣಿಗಳಾಗಿದ್ದರು.

ಈ ರೀತಿ ಅಬ್‌ಸ್ಟ್ರಾಕ್ಟ್ ಎಕ್ಸ್‌ಪ್ರೆಶನಿಸಂನ ಬೆಳವಣಿಗೆಯ ಮೇಲೆ ಸರ್ರಿಯಲಿಸಂನ ತಕ್ಷಣ ಪ್ರೇರಣೆಯನ್ನು ಕಾಣಬಹುದು. ಯುದ್ಧ ಪ್ರಾರಂಭವಾದ ಮೇಲೆ ಜಿಯೋಮಿಟ್ರಿಕಲ್ ಅಬ್‌ಸ್ಟ್ರಾಕ್ಟ್‌ನನ್ನು ವಿರೋಧಿಸಿದರು. ಬ್ರೆತಾನ್‌ನ ಸಹಾಯದಿಂದ ೧೯೪೮ ರಲ್ಲಿ ಡ ಬಫ್ರೆ ಆರ್ಟ್ಸ್ ಬ್ರುಟನ್ನನ್ನು ಸೃಷ್ಟಿಸಿದರು. ೧೯೨೦ ರಲ್ಲಿ ದೇಶದಲ್ಲಿ ಸರ್ರಿಯಲಿಸ್ಟರು ಪ್ರತಿಪಾದಿಸಿದ ಮಕ್ಕಳ ಮಾನಸಿಕ ಅಸ್ವಸ್ಥರ, ಸ್ವಂತ ಕಲಿತವರ ಮತ್ತು ಆದಿ ಜನಾಂಗಗಳ ಕಲೆ ವಿಷಯಗಳ ಕಡೆ ಆರ್ಟಬ್ರುಟ್ ಗಮನ ಹರಿಸಿತ್ತು.

ಈಗಿನ ಅಭಿರುಚಿಯ ಮೇಲೆ ಯೂರೋಪಿನ ಮತ್ತು ದೇಶಗಳ ಕಲೆಯಲ್ಲಿ ಅದ್ಭುತ ಮತ್ತು ರಹಸ್ಯಮಯ ಪರಂಪರೆಯ ಪ್ರಾಮುಖ್ಯತೆ ಸೌಂದರ್ಯದಿಂದ ಕಲ್ಪನೆ ನಿಸ್ಸಂದೇಹದ ಮೇಲೆ ಅಪಾರ ಪರಿಣಾಮ ಬೀರಿದೆ. ಸರ್ರಿಯಲಿಸಂನ ರಾಜಕೀಯ, ಸಾಮಾಜಿಕ ಮತ್ತು ನೈತಿಕ ಧ್ಯೇಯಗಳು ಈಡೇರದೆ ಇರಬಹುದು ಆದರೆ ಸರ್ರಿಯಲಿಸ್ಟ್ ಚಳುವಳಿ ಕನಿಷ್ಟ ಸಾಂಸ್ಕೃತಿಕವಾಗಿ ಮತ್ತು ಬೇರೆ ರೀತಿಯಲ್ಲಿ ನೋಡುವ ಹಾಗೂ ಯೋಚಿಸುವ ವಿಷಯಗಳ ಬಗ್ಗೆ ವಿಶಾಲವಾದ ಮತ್ತು ಶ್ರೀಮಂತವಾದ ಧೋರಣೆಯನ್ನು ಬೆಳೆಸಲು ಸಹಾಯಕವಾಗಿತ್ತು ಎಂದು ಹೇಳಬಹುದು. ಈ ರೀತಿಯಾಗಿ ಪಾಶ್ಚಾತ್ಯರಲ್ಲಿನ ಸರ್ರಿಯಾಲಿಸಂ ಪಂಥದ ಇತಿಹಾಸವನ್ನು ತಿಳಿದುಕೊಳ್ಳಲಾಗಿ ನಂತರದ ದಿನಗಳಲ್ಲಿ ಈ ಪಂಥವು ಭಾರತದಲ್ಲಿ ಹೇಗೆ ಪ್ರವೇಶ ಪಡೆಯಿತು ಮತ್ತು ಇದರ ಮೇಲೆ ಹೇಗೆ ಪ್ರಭಾವ ಬೀರುತ್ತದೆ ಎಂಬುವುದು ಈ ಕೇಳಗಿನಂತಿದೆ.

ಸರ್ರಿಯಲಿಸಂ ಪಂಥವು ಪಾಶ್ಚಾತ್ಯರಲ್ಲಿ ಇಪ್ಪತ್ತನೇ ಶತಮಾನದಲ್ಲಿ ಮಾತ್ರ ಕಾಣಿಸಿಕೊಂಡ ದೃಶ್ಯಕಲಾ ಶೈಲಿಯಾಗಿದೆ. ಆದರೆ ಇದು ಭಾರತ ದೇಶದಲ್ಲಿ ಕ್ರಿ.ಪೂ ಎರಡು ಸಾವಿರ ವರ್ಷಗಳ ಹಿಂದಿನಿಂದಲೆ ಕಾಣಿಸಿಕೊಂಡು ಬಂದ ಪಂಥವಾಗಿದೆ ಎಂದು ಹೇಳಬಹುದು. ವೇದಗಳಲ್ಲಿಯೆ ನಮಗೆ ಇದರ ಉಲ್ಲೇಖ ದೊರೆಯುತ್ತದೆ. ಭಾರತೀಯರ ಶಿವ, ವಿಷ್ಣು, ಬ್ರಹ್ಮ, ಕೈಲಾಸ, ವೈಕುಂಠ, ಸ್ವರ್ಗ, ನರಕ ಇತ್ಯಾದಿಗಳ ಪರಿಕಲ್ಪನೆಗಳು ಈ ನಿಜಾತೀತ ಪಂಥಕ್ಕೆ ಸೇರಿದವುಗಳಾಗಿವೆ. ಅಲ್ಲದೆ ಗಣೇಶ, ಯಕ್ಷ, ನಾಗ, ಕಿನ್ನರ, ದಶವತಾರದ, ಮತ್ಸ್ಯ, ಕೂರ್ಮ, ವರಹ, ನರಸಿಂಹ ಇತ್ಯಾದಿ ಸೃಷ್ಟಿಗಳು ಹಾಗೂ ಭೂತಗಳು, ಕಾಮಧೇನು, ಕಲ್ಪವೃಕ್ಷ, ರಾವಣ, ಕಾಳಿ, ಅಷ್ಟದಿಕ್ಪಾಲಕರು ಇತ್ಯಾದಿ ವಿನ್ಯಾಸಗಳು ಮಹಾಭಾರತದ ಮಾಯಾ ಅರಮನೆ ಇವೆಲ್ಲವು ಊಹಾತ್ಮಕ ಚಿತ್ರಣಗಳು ಸರ್ರಿಯಲಿಸಂ ಪಂಥದ ವ್ಯಾಪ್ತಿಗೆ ಒಳಪಡುವ ಸೃಜನಶೀಲ ಆಲೋಚನೆಗಳಾಗಿವೆ. ಇದರಿಂದ ಭಾರತೀಯರು ವೈಚಾರಿಕವಾಗಿ ಪ್ರಪಂಚದ ಇತರರಿಗಿಂತ ಎಷ್ಟೊಂದು ಪ್ರಬುದ್ದರು ಎಂಬುದು ನಿರ್ಮಿತವಾದವಾಗಿ ನಿರೂಪಿತವಾಗುತ್ತದೆ. ಈ ಶೈಲಿಯ ಹುಟ್ಟಿನ ಸಂದರ್ಭ ಬಂದಾಗ ಭಾರತೀಯರು ಪಾಶ್ಚಾತ್ಯರಿಗಿಂತ ನಾಲ್ಕು ಸಾವಿರ ವರ್ಷ ಮುಂದಿದ್ದಾರೆಂಬುದು ಇಲ್ಲಿ ಗಮನಿಸಬೇಕಾದ ಮುಖ್ಯ ಸಂಗತಿಯಾಗಿದೆ. ಎಂದು ಡಾ. ಡಿ.ಎ.ಊಪಾಧ್ಯ ಅವರು ಹೇಳಿದ್ದಾರೆ'(ಉಪಾದ್ಯ ಖ.ವಿ., ಪಾಶ್ಚಾತ್ಯ ದೃಶ್ಯಕಲೆಗಳು, ಪುಟ ೧೮೩).

ಸರ್‍ರಿಯಲಿಸಂ ಪಂಥದ ಕಲಾವಿದರು ಕಲೆಗಾಗಿ ಕಲೆ ಎಂಬ ಉದ್ದೇಶ ಹೊಂದಿದ ಕಾರಣಕ್ಕಾಗಿ ಅಸ್ಪಷ್ಟ ಮೂರ್ತ ಕಲೆಯನ್ನು ಹೀಯಾಳಿಸುತ್ತಿದ್ದರು. ಇಂಥ ಸಂದರ್ಭದಲ್ಲಿ ಇವರೆಲ್ಲರಿಗೂ ಒಂದು ಹೊಸ ಪಂಥದ ಕಡೆಗೆ ಜನರನ್ನು ಆಕರ್ಷಿಸುವುದು ಬೇಕಾಗಿತ್ತು. ಅದರಂತೆ ಜನರ ಆಸಕ್ತಿ ಮತ್ತು ಅಭಿರುಚಿಗಳನ್ನು ಪರಿವರ್ತಿಸಲು ಸರ್‍ರಿಯಲಿಸಂ ಪಂಥವನ್ನು ಹುಟ್ಟುಹಾಕಿದರು.

ಒಬ್ಬ ಒಳ್ಳೆಯ ಕಲಾವಿದ ಒಂದು ಸಿಂಹದ ಚಿತ್ರ ಬರೆಯುತ್ತಾನೆ. ಚಿತ್ರದಲ್ಲಿ ಸಿಂಹದ ಯಾವ ಅಂಶವೂ ಬಿಟ್ಟಿರುವುದಿಲ್ಲ. ರೂಪ, ರಂಗು, ಆಕಾರ, ಎಲ್ಲವೂ ಕೊರೆದಿಟ್ಟಂತೆ, ಲೆಕ್ಕಹಾಕಿ ಬರೆದಂತೆ ಇರಬಹುದು. ಆದರೆ ಆ ಚಿತ್ರದಲ್ಲಿ "ಸಿಂಹತ್ವ" ಅಂದರೆ ಸಿಂಹದಲ್ಲಿನ ಶೌರ್ಯ ಪರಾಕ್ರಮ ಗಂಭೀರತೆ ಮತ್ತು ಭಾವನೆ ಇರದಿದ್ದರೆ ಅದು ಸಿಂಹ ಆಗಲಾರದು. ಆದರೆ ಸಿಂಹತ್ವವನ್ನು ಗುರುತಿಸಿದ ಕಲಾವಿದ ಕೇವಲ ಅದನ್ನಷ್ಟೆ ಚಿತ್ರಿಸಿ, ಉಳಿದ ವಿವರಗಳಲ್ಲಿ ತಪ್ಪು ಮಾಡಿದರೂ ಅವನು ಪ್ರತಿಭಾವಂತ ಚಿತ್ರಕಾರನಾಗುತ್ತಾನೆ. ಸತ್ವಪೂರ್ಣ ವಿಷಯವನ್ನೆ ಪ್ರತಿಪಾದಿಸುವ ವ್ಯಕ್ತಿ ಲೇಖಕನಾಗುತ್ತಾನೆ ಕಲಾವಿದನಾಗುತ್ತಾನೆ ಎಂದು 'ನಂದಲಾಲ ಬೋಸ್' ಪ್ರತಿಪಾದಿ-ಸಿದ್ದಾರೆ(ಚಂದ್ರಕಾಂತ ಕುಸನೂರ, ಸಾಹಿತ್ಯ ಮತ್ತು ಚಿತ್ರಕಲೆ, ಪುಟ, ೩೯).

ಪ್ರತಿಯೊಬ್ಬ ಮನುಷ್ಯನ ಬಾಹ್ಯ ಪ್ರಪಂಚ ಒಂದೇ ರೀತಿಯದ್ದಾಗಿ ಕಾಣಿಸುತ್ತದೆ. ಆದರೆ ಒಳಗಿನ ಪ್ರಪಂಚ ಸಂಪೂರ್ಣ ಭಿನ್ನವಾಗಿರುತ್ತದೆ. ಇದರಿಂದಾಗಿ ಇಂದ್ರಿಯಗಳಿಂದ ಸಂಗ್ರಹಿಸಿದ ಅನುಭವಗಳು, ಒಳಗಿನ ಪ್ರಪಂಚದಲ್ಲಿ ಇಳಿದಾಗ ಹೇಗೆ ಕೆಲಸ ಮಾಡುತ್ತದೆ ಎಂದು ಹೇಳುವುದೆ ಸಾಧ್ಯವಿಲ್ಲ. ಹೀಗೆ ಪ್ರತಿಯೊಬ್ಬ ಕಲಾವಿದನ ಅಭಿವ್ಯಕ್ತಿ ಅವನದೆ ಆಗಿರುತ್ತದೆ. ಅಭಿವ್ಯಕ್ತಿ ಅಡಿಚಿಜಿಣ ಅಲ್ಲ, ಅಭಿವ್ಯಕ್ತಿ ಚಿಡಿಣ ಇದೆ. ಸಾಲ್ವರ್ ಡಾಲಿ (salvar dali) ತಮ್ಮ ದಿನಚರಿ– "diary of a genius" ನಲ್ಲಿ ಈ ಪುಸ್ತಕ ಇತರೆ ಡೈರಿಗಳಿಗಿಂತ ಹೇಗೆ ಬೇರೆಯಾಗಿದೆ ಎಂದು ಮತ್ತು ಅವರು ಅನ್ಯರಿಂದ ಹೇಗೆ ಭಿನ್ನರಿದ್ದಾರೆಂದು ಬರೆದ ಸಾಲುಗಳು ಗಮನಾರ್ಹವಾಗಿವೆ.

"This book will prove that the daily life of a genius, his sleep, his digestion, his aestasies, his nails, his colds, his blood, his life and death are essentially defferent from those of the rest of mankind"(ಚಂದ್ರಕಾಂತ ಕುಸನೂರ, ಸಾಹಿತ್ಯ ಮತ್ತು ಚಿತ್ರಕಲೆ, ಪುಟ, ೩೨).

ಕಥೆಗಾರ ಯಶವಂತ ಚಿತ್ತಾಲರು ಹೀಗೆ ಹೇಳುತ್ತಾರೆ. "ಕಲೆ ಎಂದರೆ ಮುಖ್ಯವಾಗಿ ನಮ್ಮ ಸುಪ್ತಪ್ರಜ್ಞೆಗೆ ನಾವು ಜಾಗೃತ ಸ್ಥಿತಿಯಲ್ಲ, ಎಚ್ಚರದ ಸ್ಥಿತಿಯಲ್ಲಿ ಆಕಾರ ಕೊಡುವ ವಿಧಾನ, ಈ ಎಚ್ಚರದ ಅಂಶದಿಂದಾಗಿಯೆ ಅದು ಮಾನವ ಮನಸ್ಸಿನ ಉಳಿದ ಆವಿಷ್ಕಾರಗಳಾದ ಪುರಾಣಗಳು, ಕನಸುಗಳು ಹಾಗೂ ನ್ಯುರೊಸಿಸ್ (ನರವ್ಯಾಧಿ) ಇವುಗಳಿಂದ ಬೇರೆಯಾಗುತ್ತದೆ. ಹೆಸರಾಂತ ಮನಃಶಾಸ್ತ್ರಜ್ಞ ಕಾರ್ಲ್‌ಯಾಂಗನ ಪ್ರಕಾರ "ಮನುಷ್ಯನ ಚಿತ್ತ ಎಲ್ಲಾ ಮಾನವೀಯ ಚಟುವಟಿಕೆಗಳಿಗೆ, ಸಂಸ್ಕೃತಿ ನಾಗರೀಕತೆಗಳಿಗೆ ಕೇಂದ್ರ ಸ್ಥಾನವಾಗಿದೆ" ಈ ಚಟುವಟಿಕೆಗಳ ಮೂಲಕವಾಗಿಯೆ ಮನುಷ್ಯನ

ಜಾಗೃತ ಪ್ರಜ್ಞೆಯು, ಸುಪ್ತ ಪ್ರಜ್ಞೆಯು ತತ್ವಗಳನ್ನು ತನ್ನಲ್ಲಿ ನಿರಂತರವಾಗಿ ಅರಗಿಸಿಕೊಳ್ಳುತ್ತಾ ವಿಕಾಸಗೊಳ್ಳುತ್ತದೆ. ಹೀಗೆ ಕಲೆಯ ಕುರಿತಾದ ನೂರಾರ ಹೇಳಿಕೆಗಳು ಬಂದರೂ ಕಲಾವಿದರ ಅಭಿವ್ಯಕ್ತಿಯ ಸ್ವರೂಪ ತನ್ನಿಂದ ತಾನಾಗಿಯೆ ಕಾಲಾನುಕ್ರಮವಾಗಿ ಬದಲಾವಣೆಯಾಗುತ್ತಲೆ ಇದೆ. ಆದರೂ "ಕಲೆ ಎಂದರೇನು" ಎಂಬ ಪ್ರಶ್ನೆಯ ಬಗೆಗೆ ಯಾವುದೆ ರೀತಿಯ ಪ್ರತಿಕ್ರಿಯೆ ವ್ಯಕ್ತಪಡಿಸುತ್ತಿಲ್ಲವೆಂಬುದಕ್ಕೆ ಇಂದಿನ ಸಂದರ್ಭದ ಕಲಾಸೃಷ್ಟಿಗಳೆ ಕಾರಣ.

ಚಿತ್ರ, ಶಿಲ್ಪ, ವಾಸ್ತುಶಿಲ್ಪಾದಿಗಳನ್ನು "ದೇಶಬದ್ದ ಕಲೆ" ಎಂದು ಗುರುತಿಸಲಾಗುತ್ತದೆ. ಅದರಂತೆಯೆ ಸಂಗೀತ, ನೃತ್ಯ, ನಾಟಕಾದಿಗಳನ್ನು "ಕಾಲಬದ್ದ ಕಲೆ" ಎಂದು ಗುರುತಿಸುತ್ತೇವೆ. ಚಲನರಹಿತವಾದ ಚಿತ್ರ ಕಾಲಬದ್ಧ ಕಲೆಗಿಂತ ಪ್ರಭಾವಿ ಎಂಬುದನ್ನು ಪ್ರಪಂಚದಲ್ಲಿ ಪ್ರಮುಖ ಚಿತ್ರ ನೆಲೆಗಳನ್ನು ಆಧರಿಸಿ ಹೇಳಬಹುದಾಗಿದೆ. ಅದಕ್ಕೆಂದೆ ಗ್ರೀಕ್ ಕವಿ ಪ್ಲೊಟಾರ್ಕ್‌ನ ಚಿತ್ರವನ್ನು "ನಿಶ್ಯಬ್ಧವಾದ ಕವಿತೆ ಎಂದು ವರ್ಣಿಸುತ್ತಾನೆ. ಒಂದು ಚಿತ್ರ ಒಬ್ಬೊಬ್ಬ ನೋಡುವವನಿಗೆ ವೈವಿಧ್ಯಮಯ ಅನುಭವವನ್ನು ನೀಡಬಹುದಾದ ಸಾಧ್ಯತೆಗಳೆ ಹೆಚ್ಚು ಅದರಲ್ಲೂ ಇತ್ತೀಚಿಗೆ ಆಧುನಿಕ ಚಿತ್ರಗಳ ಒಲವು ವಿಭಿನ್ನ ಅನುಭವಗಳನ್ನು ನೀಡುವಲ್ಲಿ ಮುಂಚೂಣಿಯಲ್ಲಿವೆ. ಕಲೆ ಕೇವಲ ಮಾನಸಿಕ, ಬೌದ್ಧಿಕ, ಆಧ್ಯಾತ್ಮಿಕ ಅಥವಾ ಧಾರ್ಮಿಕಕ್ಕೆ ಸೀಮಿತವಲ್ಲ, ಪ್ರಾಪಂಚಿಕವೂ ಅಲ್ಲ, ಲೌಕಿಕವೂ ಅಲ್ಲ, ಒಟ್ಟಾರೆ ಹೇಳವುದಾದರೆ ಕಲೆ ಇದೆಲ್ಲವನ್ನು ಒಳಗೊಂಡಿರಬಹುದು ಅಥವಾ ಇವುಗಳಲ್ಲಿ ಕೆಲವನ್ನು ಹೊಂದಿರಬಹುದಾಗಿದೆ. ಇಲ್ಲವೆ ಇವೆಲ್ಲವನ್ನು ಮೀರಿದ ಇನ್ನೇನನ್ನೊ ಒಳಗೊಂಡಿರಬಹುದಾದ ಅನುಮಾನಗಳಿಗೆ ಸಾಂತ್ವನ ನೀಡಬಲ್ಲ ಸಂವಾದದಿಂದ ತಿಳುವಳಿಕೆ ಹಾಗೂ ಚೈತನ್ಯ ತುಂಬಬಲ್ಲ ಪ್ರಜ್ಞಾಪೂರ್ವಕವಾಗಿ ಹೊರ ಹಾಕಬಹುದಾದ ಕಲಾವಿದರು ಬೇಕಾಗುತ್ತದೆ.

ನಮ್ಮ ಪ್ರಾಚೀನ ಚಿತ್ರಕಲೆಯ ಸ್ವರೂಪ ಇಲ್ಲದಿದ್ದರೂ ಸಾಂಪ್ರದಾಯಿಕ ಸಂದರ್ಭದಲ್ಲಿ ಪ್ರಾಚೀನ ಕಲಾಶೈಲಿಯನ್ನು ಇಂದಿನ ಆಧುನಿಕ ಸಂದರ್ಭದಲ್ಲಿಯೂ ಆಗಾಗ ಪುನರಾವರ್ತಿಸಿಕೊಳ್ಳುತ್ತೇವೆ. ಹೇಗೆ ಎಂದರೆ ನಮ್ಮ ನಡುವಿನ ಆಧುನಿಕೋತ್ತರ ಕಲಾ ಚಳುವಳಿಗಳಲ್ಲಿ ಪ್ರಕಟಗೊಳ್ಳುತ್ತಿರುವ ಚಿತ್ರಗಳಲ್ಲಿ ಪ್ರಾಚೀನ ಎನ್ನುವಂತಹ ಸಾಂಪ್ರದಾಯಿಕ ರೂಪಾಂಶಗಳು ವಿಕೃತತೆಯ ರೂಪದಲ್ಲಿ ಆಧುನಿಕ ಸಂವೇದನೆಗಳನ್ನು ಹೊತ್ತು ಬರುತ್ತಿರುವುದನ್ನು ಹಲವಾರು ಸಂದರ್ಭದಲ್ಲಿ ಕಾಣಬಹುದಾಗಿದೆ.

ಚಿತ್ರಕಲಾವಿದ ಸೃಷ್ಟಿಯ ಎಲ್ಲ ವಸ್ತುಗಳನ್ನು ಅನುಕಂಪದಿಂದ ನೋಡುವುದರಿಂದ ಅವುಗಳೊಂದಿಗೆ ಮೈತ್ರಿ ಸಾಧಿಸುವುದರಿಂದ ಅವೆಲ್ಲಾ ಅವನಿಗೆ ಜೀವಂತವಾಗಿ ಕಾಣಿಸುತ್ತವೆ. ಇದರಿಂದಾಗಿ ಅವನು ರಚಿಸಿದ ಚಿತ್ರಗಳಲ್ಲಿಯೂ ಜೀವ ತುಂಬಿಕೊಳ್ಳುತ್ತವೆ. ಇಲ್ಲಿ ನಾನು ನನ್ನ ಅಧ್ಯಯನದ ವಿಷಯದ ವ್ಯಾಪ್ತಿ ಕರ್ನಾಟಕದ ಕಲಾಕೃತಿಗಳನ್ನು ಅನುಲಕ್ಷಿಸಿ ಆಗಿರುವುದರಿಂದ ಸರ್ರಿಯಲಿಸಂ ಪಂಥ ಭಾರತದಲ್ಲಿ ಯಾವ ಕಲಾವಿದರ ಮೇಲೆ ಪ್ರಭಾವ ಬೀರಿತು ಮತ್ತು ಕರ್ನಾಟಕದಲ್ಲಿ ಯಾವ ಕಲಾವಿದರು ತಮ್ಮ ಕಲಾಕೃತಿಗಳಲ್ಲಿ ಸರ್ರಿಯಲಿಸಂನ ಅಂಶಗಳನ್ನು ಇನ್ನೂ ಉಳಿಸಿಕೊಂಡು

ಬಂದಿದ್ದಾರೆ ಎನ್ನುವದು ತಿಳಿಸಿಕೊಡುವ ನಿಟ್ಟಿನಲ್ಲಿ ಅಧ್ಯಯನ ಮಡಲಾಗಿದೆ. ಅಂದಿನ ಕಲಾವಿದರ ಮೇಲೆ ಇದರ ಪ್ರಭಾವ ಬೀರಿದೆಯಂದು ಹೇಳಬಹುದು. ಮೊದಲಿಗೆ ಪಾಶ್ಚಾತ್ಯ ನವ್ಯಕಲೆಗಳ ಪ್ರಭಾವ ಭಾರತದ ಮೇಲೆ ಬೀರಿದಾಗ ಸ್ವಾತಂತ್ರ್ಯ ನಂತರದ ಎರಡು ದಶಕಗಳಲ್ಲಿ ಸತೀಶ್ ಗುಜ್ರಾಲ್‌ರು ಮಾಡಿದ ಕಲಾಕೃತಿಗಳಲ್ಲಿ ಕೆಲವು ಸರ್‍ರಿಯಲಿಸಂ ಅಂಶಗಳನ್ನು ಕಾಣಬಹುದು ಮುಂದಿನ ಅನೇಕರಿಗೆ ಸ್ಪೂರ್ತಿ ನೀಡಿದೆ ಅವರ ಚಿತ್ರಗಳಲ್ಲಿ ಕಂಡುಬರುವ ವಿರೂಪತೆ ಹಲವಾರು ವಿಧಗಳಲ್ಲಿವೆ. ಕ್ರೂರವಾದ ಮೃಗೀಯ ಲೈಂಗಿಕತೆಯಲ್ಲಿ ಸ್ತ್ರೀಯ ಅಸಹಾಯಕತೆ, ಸೌಂದರ್ಯದೊಂದಿಗೆ ಇರುವ ಕುರೂಪ, ಸ್ವಂತ ಭಾವ ಚಿತ್ರದಲ್ಲೂ ಎಲುಬುಗಳ ಆವರಣ, ಮುಚ್ಚಿದ ಮುಖದೊಳಗಿನ ದುಃಖ ದುಮ್ಮಾನಗಳು ವಸ್ತು ಮತ್ತು ಶೈಲಿಗಳನ್ನು ಒಂದು ಮಾಡಿವೆ. ಗುಜ್ರಾಲ್ ಅವರ ಪ್ರಭಾವ ಲಕ್ಷ್ಮಣಗೌಡ ಅವರ ರೇಖಾಚಿತ್ರಗಳಲ್ಲಿ ಕಾಣಬಹುದು ಬಿಕಾಶ್ ಭಟ್ಟಾಚಾರ್ಯವರ ತೈಲ ಚಿತ್ರಗಳ ಶಿರೋರಹಿತ ಆಕೃತಿಗಳಲ್ಲಿ ಕಾಣಬಹುದು. ಲಕ್ಷ್ಮಣಗೌಡ ಆಕೃತಿಗಳು ತಗಡಿನಲ್ಲಿ ಮಾಡಿದಂತೆ ಅದು ಜಜ್ಜಿ ಹೋದಂತೆ, ಹರಿದು ಹೋದಾಗ ಹೊಲಿದಂತೆ, ಮೊಳೆ ಹೊಡೆದಂತೆ ವಿರೂಪಗೊಳಿಸಿದ್ದಾರೆ. ಬಿಕಾಶ್‌ರವರಲ್ಲಿ ಕಡಿಮೆ ಸಂಕೇತಗಳಿದ್ದು ಯಾವುದೊ ಒಂದು ಭಯಂಕರ ರೂಪ ಕಂಡುಬರುತ್ತದೆ.

ಉಳಿದಂತೆ ಗಣೇಶ್ ಫೈನ್, ಕಿಷನ್ ಖನ್ನ, ಶ್ಯಾಮಲ್ ದತ್ತರಾಯ್, ಶಂಷಾದ್, ಜೋಗನ್ ಚೌಧರಿ, ಸುಜಾ, ಭೊಪೆನ್ ಕಕ್ಕರ್, ಆಶಾ, ಎ.ರಾಮಚಂದ್ರನ್, ಜತಿನ್‌ದಾಸ್, ಮುಂಜೀತ್ ಬಾವಾ ಪರಿತೋಶ್ ಸೇನ್, ಧೀರಜ್ ಚೌಧರಿ, ರಾಮೇಶ್ವರ್ ಬಟ್ಟ್ ಮುಂತಾದ ಅನೇಕ ಹೆಸರಾಂತ ಕಲಾವಿದರನ್ನು ಉದಾಹರಿಸಬಹುದು. ಬರೋಡ ಹಾಗೂ ದೆಹಲಿ ಶಾಲೆಗಳಿಂದ ಬಂದ ಕೆಲವು ಕಲಾವಿದರು ತಮ್ಮದೆ ಆದ ಶೈಲಿಯನ್ನು ರೂಪಿಸಿಕೊಳ್ಳುವಲ್ಲಿ ಆಕೃತಿಗಳಲ್ಲಿ ಅಸಂಗತತೆಯನ್ನು ತಂದಿರುವುದು ಕಾಣಬಹುದು. ಅಂಜೋಲಿ ಮೆನೆನ್ ಹಲವು ದಶಕಗಳಿಂದ ಸುಂದರ ನಗ್ನಸ್ತ್ರೀಯ ಆಕೃತಿಯೊಂದಿಗೆ ಕೋತಿ, ನಾಯಿ, ಬೆಕ್ಕು, ಹಕ್ಕಿ ಇತ್ಯಾದಿಗಳನ್ನು ಇರಿಸಿ ನಿಗೂಢ ಚಿತ್ರರಚನೆಯಲ್ಲಿ ಹೆಸರು ಪಡೆದಿದ್ದಾರೆ. ಹಾಗೆ ಕರ್ನಾಟಕದ ಕಲಾವಿದರು ಕೂಡಾ ಸರ್‍ರಿಯಲಿಸಂ ಪಂಥದಲ್ಲಿ ತೊಡಗಿದರು. ಮೊದಲಿಗೆ ಕರ್ನಾಟಕದಲ್ಲಿ ಹಡಪದ್ ಅವರು ವಿರೂಪಗೊಳಿಂದ ಚಿತ್ರಗಳಲ್ಲೂ ಸೌಂದರ್ಯವನ್ನು ಕಾಣಬಹುದೆಂದು ತೋರಿಸಿಕೊಟ್ಟರು. ಮನುಷ್ಯಾಕೃತಿಗಳಲ್ಲಿ ತಲೆಯು ಬದಲಿಗೆ ಎಲೆಗಳನ್ನು ಇರಿಸಿ ವಿರೂಪ, ಸೌಂದರ್ಯ ಹಾಗೂ ಭ್ರಮೆಗಳನ್ನು ಏಕಕಾಲದಲ್ಲಿ ಬರುವಂತೆ ಹಲವಾರು ಚಿತ್ರಗಳಲ್ಲಿ ರಚಿಸಿದ್ದರು. ಯೂಸುಫ್ ಅರೆಕಲ್‌ರವರು ದೈನ್ಯತೆ, ದಾರುಣ್ಯತೆಗಳ ವಿಷಯಕ್ಕೆ ಪೂರಕವಾಗಿ ವಿರೂಪಗೊಳ್ಳುತ್ತದೆ. ಬಾಯಿ ಹೊಲಿದ ಬೊಂಬೆಗಳಂತೆ ಇರುವ ಮನುಷ್ಯಾಕೃತಿಗಳು, ನರಕಲೋಕದ ನಿಗೂಡವಾದ ವಾತಾವರಣದೊಂದಿಗೆ ರಚಿತವಾಗಿರುವುದನ್ನು ಸಿ.ಚಂದ್ರಶೇಖರ್ ಅವರ ಚಿತ್ರಗಳಲ್ಲಿ ಕಾಣಬಹುದು. ಚಂದ್ರನಾಥ್ ಆಚಾರ್ಯ್ಯರ ಚಿತ್ರಗಳಲ್ಲಿ ಮೊದಲಿಗೆ ರೂಪಗಳು ಗಾಳಿಯಲ್ಲಿ ಹಾರುತ್ತಿರುವಂತೆ ಕನಸಿನ ಲೋಕದಲ್ಲಿ ಸಂಚರಿಸುತ್ತಿದ್ದು ನಂತರದ ಚಿತ್ರಗಳಲ್ಲಿ ಅವು ಸ್ಥಿರವಾಗಿ ನಿಂತಿರುವಂತೆ, ಸನ್ನಿವೇಶಗಳನ್ನು ಚಿತ್ರಸಿದ್ದಾರೆ. ಹೀಗೆ ಸರ್‍ರಿಯಲಿಸಂ ಅಂಶಗಳು ಕರ್ನಾಟಕದ

ಇನ್ನೂ ಹಲವಾರು ಕಲಾವಿದರ ಕಲಾಕೃತಿಗಳಲ್ಲಿ ಕಾಣತೊಡಗಿದವು. ಶಿಲಾಗೌಡರ ರೇಖಾ ಪ್ರಧಾನವಾಗಿ ನವಿರಾದ ಹಾಸ್ಯದೊಂದಿಗೆ ಅವರ ಆಕೃತಿಗಳು ವಿರೂಪಗೊಂಡ ಶೈಲಿಯಲ್ಲಿವೆ. ಇನ್ನೂ ಗ್ರಾಫಿಕ್ ಮಾಧ್ಯಮದಲ್ಲೂ ಸರ್ರಿಯಲಿಸಂ ಅಂಶಗಳು ಪ್ರಾರಂಭಗೊಂಡವು. ಸೋಮನಾಥ್ ಹೊರಯವರು ನೋವು, ದುಃಖಗಳನ್ನು ತೀವ್ರವಾಗಿ ತೋಡಿಕೊಳ್ಳುವಂತ ಚಿತ್ರಗಳು, ಲಕ್ಷ್ಮಣಗೌಡ ವಿಕೃತರೂಪದ ಕಲಾಕೃತಿಗಳು ಹಾಗೂ ಚಿ.ಸು.ಕೃಷ್ಣಸೆಟ್ಟಿಯವರ ಮೊದಲಿನ ಗ್ರಾಫಿಕ್‌ಗಳಲ್ಲಿ ಆಕೃತಿಗಳಲ್ಲಿಯ ಅಂಗಾಂಗಗಳು ಅದಲು ಬದಲಾಗಿ ವಿರೂಪದೊಂದಿಗೆ ಭಯಂಕರತೆಯನ್ನು ಒಳಗೊಂಡಿದ್ದವು, ವಿಜಯ ಬಾಗೋಡಿಯವರ ಗ್ರಾಫಿಕ್‌ಗಳೂ ಸುಂದರತೆಯಿಂದ ವಿರೂಪದತ್ತ ವಾಲುತ್ತಿರುವಂತಿವೆ. ಹೀಗೆ ಮುಂದುವರೆದು ಜೆ.ಎಂ.ಎಸ್.ಮಣಿ, ಕೆ.ಆರ್.ಸುಬ್ಬಣ್ಣ, ಎನ್.ಮರಿಶಾಮಾಚಾರ್, ರಣಬೀರ್ ಕಳೇಕರ್, ಬಾಬು ಈಶ್ವರ ಪ್ರಸಾದ್, ಗುರುಸಿದ್ಧಪ್ಪ, ಸುಮೇಧ ರಾಜೇಂದ್ರನ್, ಸುನಿಲ್ ಮಮದಾಪುರ್, ಚಂದ್ರಹಾಸ್ ಜಾಲಿಹಾಳ್ ಹೀಗೆ ಹಲವಾರು ಕಲಾವಿದರ ಕಲಾಕೃತಿಗಳಲ್ಲಿ ಸರ್ರಿಯಲಿಸಂ ಅಂಶಗಳನ್ನು ಕಾಣಬಹುದು. ಅನೇಕ ಯುವ ಕಲಾವಿದರು ಇವರ ಪ್ರಭಾವದಿಂದ ಈ ಶೈಲಿಯಲ್ಲಿ ಕಲಾಕೃತಿಗಳನ್ನೂ ರಚಿಸುತ್ತಿದ್ದಾರೆ. ರುದ್ರಗೌಡ ಇಂಡಿ, ನಿಂಗರಾಜ್ ಪಾಟೀಲ, ವೀರೇಶ್ ರುದ್ರಸ್ವಾಮಿ, ನಂದಬಸಪ್ಪಾ ವಾಡೆ, ಮಲ್ಲಿಕಾರ್ಜುನ್ ಕನ್ನೂರ್, ನವೀನ್ ಕುಮಾರ್.ಬಿ, ಯಲ್ಲಾಲಿಂಗ ಅಶೋಕ ಮಾನ್ವರ್, ಶಬ್ಬಿರ ನದಾಫ್, ಸ್ವಪ್ನಾ ಮ. ಕಲಾದಗಿ ಹೀಗೆ ಹಲವಾರು ಕಲಾವಿದರು ಸರ್ರಿಯಲಿಸಂ ಪಂಥದ ಅಂಶಗಳನ್ನು ಅವರ ಕಲಾಕೃತಿಗಳಲ್ಲಿ ಅಳವಡಿಸಿಕೊಂಡು ಕಲಾಕೃತಿ ರಚಿಸುತ್ತಿದ್ದಾರೆ. ಇಲ್ಲಿ ಕೆಲವು ಕಲಾವಿದರ ಕಲಾಕೃತಿಗಳ ಪರಿಚಯವನ್ನು ಒಂದೊಂದಾಗಿ ನೋಡಬಹುದು.

## ಸರ್ರಿಯಲಿಸಂ ಚಿತ್ರಕಲೆಯ ಲಕ್ಷಣಗಳು

ಸರ್ರಿಯಲಿಸಂ ಪದದ ಅರ್ಥವೆಂದರೆ "ನೈಜತೆ ಅಥವಾ ವಾಸ್ತವಿಕತೆಗಿಂತಲೂ ಅತೀತವಾಗಿದ್ದು" ಈ ಶೈಲಿಯು ಗೋಚರವಾಗುವುದಕ್ಕಿಂತ ಅತ್ಯಂತ ಸೂಕ್ಷ್ಮತೆಯಲ್ಲಿ ಹಾಗೂ ಮನಸ್ಸಿನ ಆಳವಾದ ತರಂಗಗಳಲ್ಲಿ ಹುದುಗಿರುವ ವಿಷಯಗಳ ಕಲಾಕೃತಿಗಳಿರುತ್ತವೆ. ನೋಡಲಾರದ ವಸ್ತು ಉಪಕರಣಗಳು ಕಲಾಕೃತಿಗಳಿಂದ ದೃಶ್ಯಗಳಾಗಿ ಕಾಣಲ್ಪಡುತ್ತವೆ'(ಬಾಯಿರಿ ಬಿ.ಪಿ., ನವ್ಯಕಲೆ ಹಾಗೂ ಕಲೆಗಾರರು, ಪುಟ, ೨೮). ಎಂದು ಹೇಳಬಹುದು.

"ಹುಚ್ಚರಲ್ಲದ ಹುಚ್ಚರು" ಎಂದು ಸರ್ರಿಯಲಿಸ್ಟ್ ಕಲಾವಿದರನ್ನು ಮೂದಲಿಸಿದವರಿದ್ದಾರೆ. ಏಕೆಂದರೆ ಅವರ ಕೃತಿಗಳಲ್ಲಿ ಲೋಹದ ಕೈಗಡಿಯಾರಗಳು ಮೆತ್ತಗಾಗಿ ಕೊಂಬೆಯಿಂದ ನೇತಾಡುತ್ತವೆ. ಮಾನವನು ಗಾಳಿಯಲ್ಲಿ ತೇಲಾಡುತ್ತಾನೆ ಮೃದುರೋಮಗಳಿಂದ ತಯಾರಾದ ಪಾನೀಯ ಲೋಟ, ತಟ್ಟೆಗಳಿವೆ, ಇಂತಹ ಉನ್ಮಾದಾವಸ್ಥೆಯ ಕಲ್ಪನೆಗಳು ಸರ್ರಿಯಲಿಸಂ ಚಿತ್ರಗಳಲ್ಲಿ ಕಂಡುಬರುತ್ತವೆ'( ಬಾಯಿರಿ ಬಿ.ಪಿ., ನವ್ಯಕಲೆ ಹಾಗೂ ಕಲೆಗಾರರು, ಪುಟ, ೨೮).

"ಸಿಗ್ಮಂಡ್ ಫ್ರಾಯ್ಡನ ಸ್ವಪ್ನಗಳ ವಿವೇಚನೆಯಿಂದ ಒಂದು ತರಹದ ರಹಸ್ಯ ಮಯವಾದಂಥ ವಿಚಿತ್ರ ಲೋಕವೇ ನಮ್ಮ ಕಣ್ಣು ಮುಂದೆ ನಿಂತಂತಾಯಿತು. ಒಳಮನಸ್ಸಿನ ವಿಶ್ಲೇಷಣೆಯಿಂದ ಮನುಷ್ಯನ ಆಂತರಿಕ ಪ್ರಪಂಚದ ಆಗುಹೋಗುಗಳ ಪರಿಚಯ ಮಾಡಿಕೊಳ್ಳಲು ಫ್ರಾಯ್ಡನ ಸಿದ್ಧಾಂತಗಳಿಂದ ಸಾಧ್ಯವಾಯಿತು. 'ಸರ್ರಿಯಾಲಿಸಂ' ಕಲಾವಿದರಿಗೆ ಇದರಿಂದ ಪುಷ್ಟಿ ದೊರೆಕಿದಂತಾಯಿತು"(ಚಂದ್ರಕಾಂತ ಕುಸನೂರ, ಸಾಹಿತ್ಯ ಮತ್ತು ಚಿತ್ರಕಲೆ, ಪುಟ, ೧೨೪-೧೨೫).

## More than real

'Surrealism is known for its bizarre imagery, but it was not meant to be un-real. The name actually means more thar real. Or surreal (sur is French for "above"). Breton said the movement rose from the ashes of Dada. It also grew out of a new interest in the workings of the mined. Especially the irrational and the unconscious, inspired by turn-of-the-century Viennese psychiatrist singmund Freud. He claimed that much of what we do is trlggered by unconscious thoughts and desirs, and that these can be revealed in dreams'(Rosie Dickins, MODERN ART, Page, 40). ಎಂದು ರೂಸ್ ಡಿಕಿನ್ಸ್ ಅವರು ಮಾರ್ಡನ್ ಆರ್ಟ್ ಪುಸ್ತಕದಲ್ಲಿ ಉಲ್ಲೇಖಿಸಿದ್ದಾರೆ.

ಮಾನವನಿಗೆ ಆತನ ಜಾಗ್ರತಾವಸ್ಥೆಯ ಆಚಾರ, ವಿಚಾರ, ವಸ್ತುಗಳು ಮಾತ್ರ ಸಂಬಂಧಪಟ್ಟವುಗಳಲ್ಲ. ಆತನಲ್ಲಿ ಅಸಂಬದ್ಧ, ವಿಚಿತ್ರ ಅನಿಸಿಕೊಳ್ಳಬಹುದಾದ ಆವೇಗಗಳು ಮನಸ್ಸಿನ ಆಳದಲ್ಲಿ ಹುದುಗಿವೆ. ಕೆಲವು ನಿರ್ಬಂಧಗಳು ನಮ್ಮಲ್ಲಿ ಆ ಅಂತರ್ಭಾವಗಳನ್ನು, ವ್ಯಕ್ತವಾಗದಂತೆ ವಿರೋಧಿಸುತ್ತವೆ. ಹಾಗೆ ಬಲವಂತವಾಗಿ ನಿಗ್ರಹಿಸಲ್ಪಟವುಗಳು ಸ್ವಪ್ನಾವಸ್ಥೆಯಲ್ಲಿ ಪ್ರಕಟವಾಗುವುದುಂಟು ಎಂದು ಮುಂತಾಗಿ ಸುಪ್ತ ಚೈತನ್ಯದ ವೈಚಿತ್ರಗಳ ಕುರಿತು ಆತ ಅರಿವು ಮೂಡಿಸಿದ. ಅಂತಹ ಸುಪ್ತ ಚೇತನವನ್ನು ತರ್ಕ, ಸಂಸ್ಕೃತಿ ಮುಂತಾದ ಬಂಧನಗಳಿಂದ ಮುಕ್ತಗೊಳಿಸಿ, ಸರ್ರಿಯಲಿಸಂ ಕೃತಿಗಳಲ್ಲಿ ವ್ಯಕ್ತಗೊಳಿಸುತ್ತಾರೆ.

- ಸರ್ರಿಯಲಿಸಂ ಕಲಾಕೃತಿ ರಚಿತವಾಗುವ ಅದರ ಹಿಂದಿದ್ದ ಆಲೋಚನಾ ದಾಟಿಯ ಪರಿಚಯ ಮಾಡಿಕೊಂಡರೆ ಸರ್ರಿಯಾಲಿಸಂ ಪ್ರತಿಮೆಗಳು ಹೆಚ್ಚು ತೀವ್ರವಾಗಿ ನಮ್ಮ ಗ್ರಹಿಕೆಗೆ ದಕ್ಕುತ್ತವೆ.
- ಸರ್ರಿಯಲಿಸಂ ಎಂದು ನಾವು ನೋಡುವಂತಹ ಕೃತಿಗಳು ಚಿತ್ರ ನಿರ್ಮಾಣದ ತಂತ್ರದಲ್ಲಿ ಆದಂತಹ ಎರಡು ವಿಶೇಷ ಕ್ರಾಂತಿಯಿಂದ ತಮ್ಮ ಕೆಲವು ಲಕ್ಷಣಗಳನ್ನು ಪಡೆದಿವೆ. ಮೊದಲನೆಯದರ ಫಲವಾಗಿ ಸರ್ರಿಯಲಿಸಂನ ಹೆಚ್ಚಿನ ಚಿತ್ರಗಳು ತೈಲವರ್ಣದಲ್ಲಿ ರಚಿತವಾದವು. ಎರಡನೆಯದರ ಫಲವಾಗಿ ಕೃತಿಗಳು ಕ್ರಮಬದ್ಧವಾದ ಸುದಾರಣೆಯ ತಂತ್ರ ಹಿಡಿಯಿತು.

•ಬಣ್ಣದ ಬಳಕೆಯ ಈ ನವೀನ ತಂತ್ರದ ಜೊತೆಗೆ ಸರ್‍ರಿಯಾಲಿಸಂ ಕಲಾವಿದರು ತಮ್ಮ ಹಿಂದಿನ ಚಿತ್ರಕಲೆಗಳಿಂದ ಮೂಲಭೂತ ನಂಬಿಕೆಯನ್ನೇ ಪ್ರಶ್ನಿಸಿದರು. ಚಿತ್ರವೊಂದು ಯಾವುದಾದರೂ ಒಂದು ವಸ್ತುವಿನ, ವಿಷಯದ ತದ್ವತ್ ಚಿತ್ರಣವಾಗಬೇಕೆಂಬ ಆಲೋಚನೆಯನ್ನು ತೊರೆದು, ಚಿತ್ರ ಪ್ರಬಂಧವನ್ನೆ (ಪಿಕ್ಟೊರಿಯಲ್ ಕಾಂಪೋಸಿಷ್‌ನ್) ತಮ್ಮ ಮುಖ್ಯ ಕಾಳಜಿಯಾಗಿರಿಸಿ ಕೊಂಡರು.

• ಸರ್‍ರಿಯಾಲಿಸ್ಟ್ ಕಲಾವಿದ ಡಾಲಿಯ ಅಂತರಯುದ್ಧದ ಮುನ್ಸೋಚನೆ ಒಂದು ದುಃಸ್ವಪ್ನದಂತೆ ನಮ್ಮನ್ನು 'ವೈಯಕ್ತಿಕವಾಗಿ ತಟ್ಟಬಲ್ಲ ಸಂಕೇತದೊಂದಿಗೆ ಡಾಲಿ ಇದನ್ನು ಚಿತ್ರಿಸಿದ್ದಾರೆ. ಈ ಚಿತ್ರಕ್ಕೆ ಆತ 'ಬೇಯಿಸಿದ ಬಟಾಟೆಯಿಂದ ಮಾಡಿದ ಮೃದು ರಚನೆ' ಎಂಬ ವಿಚಿತ್ರ ಹೆಸರನ್ನೂ ಸಹ ಕೊಟ್ಟಿದರು. ಚಿತ್ರದಲ್ಲಿ ಕಾಣುವ ಬೆಳ್ಮೂಗಿಲುಳ್ಳ ನೀಲಿಬಾನು ಕಾಣಬಹುದು.

* ಸರ್‍ರಿಯಲಿಸಂ ಕಲಾವಿದರಿಗೆ ಹೊರ ಜಗತ್ತಿನ ವಾಸ್ತವದೊಂದಿಗೆ ಇರುವಷ್ಟೇ ಪ್ರಬಲವಾದ ನಂಟು ಈ ಲೋಕದೊಂದಿಗೆ ಸಹ ಈ ಸ್ವಪ್ನ ಲೋಕದ ಅಚ್ಚರಿ ಬೀಳಿಸುವ, ಕಾಡುವ, ಬೆಚ್ಚಿಬೀಳಿಸುವ ಭಾಷೆಯನ್ನು ಬಳಸಿದವರು. ಅವರು ಹೊರ ಲೋಕದ ವಾಸ್ತವದ ಮೇಲು ತಮ್ಮ ಭ್ರಮಾ ಲೋಕವನ್ನು ಸೃಷ್ಟಿಸುವ ಲಕ್ಷಣಗಳು ಕಾಣಿಸುತ್ತಿದ್ದವು.

• ಸರ್‍ರಿಯಲಿಸಂ ಪಂಥದಲ್ಲಿ ವಿಜ್ಞಾನವು ವೈಯಕ್ತಿಕ ಛಂದೋಬದ್ಧತೆಯನ್ನು ವಿಶ್ವವಲಯದಲ್ಲಿ ಸಾಮರಸ್ಯಗೊಳಿಸಿ ನೋಡುವ ಒಂದು ಉದಾತ್ತ ವಿಚಾರಕ್ಕೆ ಎಡೆಮಾಡಿದೆ. ಇದರಿಂದಾಗಿ ಒಂದು ಆಕಾರವು ಇನ್ನೊಂದು ಆಕಾರದಲ್ಲಿ ವಿಲೀನವಾಗುವ ಅಂದರೆ ಆಕಾರಗಳು ನಿರಾಕಾರವಾಗುವ ಸಂದರ್ಭ ಹೊಂದಿವೆ. ಇದರಿಂದಾಗಿ ಶಾಶ್ವತದಿಂದ ನಶ್ವರದೆಡೆಗೆ, ನಿಶ್ಚಿತತೆಯಿಂದ ಅನಿಶ್ಚಿತತೆ. ಕ್ಷಣಿಕ ಹಾಗೂ ಬಾವೋದ್ರೇಕಿತ ಸಂವೇದನೆಗಳೆಡೆಗೆ ಮನ ಸೆಳೆಯುವ ಸೌಂದರ್ಯ ಪ್ರಜ್ಞೆವರ್ಧಿಸುವತ್ತದೆ.

• ಸರ್‍ರಿಯಲಿಸ್ಟ ಕಲಾವಿದರು ಚಿತ್ರಸಿದ್ದರೆ ಅವರಿಗೆ ಅವುಗಳ ಬಗ್ಗೆ ಹೆಚ್ಚಿನ ಆಸಕ್ತಿಯಿದೆಯೆಂದೂ ತಿಳಿಯಲಾಗುತ್ತದೆ. ದೇಹದ ಆಸಕ್ತಿಯಿದೆಯೆಂದೂ ತಿಳಿಯಲಾಗುತ್ತದೆ. ದೇಹದ ಪ್ರತಿ ಅಂಗಗಳೂ ಅವುಗಳದೆ ಆದ ಕೆಲಸ ನಿರ್ವಹಿಸುವುದರಿಂದ ಅಷ್ಟಕ್ಕೆ ಅವುಗಳಿಗೆ ಪ್ರಾಮುಖ್ಯವಿರುತ್ತದೆ. ಹಾಗೆ ಚಿತ್ರಿಸುವಾಗ ಒಂದು ಅಂಗ ಭಾಗ ಹಿಗ್ಗಿಸಿದಾಗ ಉಳಿದ ಯಾವುದೊ ಒಂದನ್ನು ಕುಗ್ಗಿಸಿ ಒಟ್ಟು ಚಿತ್ರವನ್ನು ಸಮತೋಲನ (ಬ್ಯಾಲೆನ್ಸ್)ದಲ್ಲಿ ಇರಿಸಬೇಕಾಗುತ್ತದೆ. ತಲೆಯನ್ನು ತೀರಾ ದಪ್ಪವಾ ಚಿತ್ರಸಿದರೆ ಕೈ-ಕಾಲುಗಳನ್ನು ಕುಗ್ಗಿಸಿರುವುದನ್ನು ಕಾಣುತ್ತೇವೆ. ಇವುಗಳು ಸಹ ಭಾವನೆಯ ತೀವ್ರತೆಯನ್ನು ಹೇಳುವಂತಹವುಗಳು.

• ಈ ಪಂಥದಲ್ಲಿ ಕಾಣಬಹುದಾದ ಅಂಶವೆಂದರೆ ಮನದ ಒಳಗಿನ ತುಡಿತವನ್ನು ಹಸಿ-ಹಸಿಯಾಗಿಯೆ ಶಬ್ದಗಳಲ್ಲಿ ಕಾವ್ಯ-ಪ್ರಬಂಧ ರಚಿಸಿದಂತೆ, ಭಾವಾವೇಶವಾಗಿ ಕುಣಿದಂತೆ, ಧ್ವನಿಸಿದಂತೆ ಕ್ಯಾನ್ವಸ್ ಮೇಲೆ ಬಣ್ಣಗಳಿಂದ ಆಟವಾಡಿರುವರು. ಆದರೆ ಹೇಳುವ ವಿಷಯದಲ್ಲಿ

ಇರುವ ತೀವ್ರತೆ ಸೆಳೆಯುತ್ತದೆಯಲ್ಲದೆ. ಐತಿಹಾಸಿಕವಾಗಿ ಸ್ಥಾನವನ್ನು ಪಡೆದುಕೊಳ್ಳುತ್ತದೆ. ನೋಡುಗನಿಗೆ ಒಮ್ಮೆ ಆಘಾತ(ಶಾಕ್) ನೀಡುವುದಲ್ಲದೆ ಸಮಕಾಲೀನ ಘಟನೆಯನ್ನು ಚಿತ್ರಿಸಿರುವರು.

- ಸರಿಯಲಿಸಂ ಕಲಾವಿದರು ವಿಕೃತ ರೂಪಗಳ ಚಿತ್ರ ರಚನೆ ಮಾಡಿದ್ದಾರೆ ಆಕಾರಗಳನ್ನು ತೀರಾ ವಿರೂಪಗೊಳಿಸುವುದರಿಂದ ಹಿಡಿದು ಕನಸಿನ ಲೋಕದ(ಫ್ಯಾಂಟಸಿ) ಚಿತ್ರಗಳವರೆಗೆ ಇವರಲ್ಲಿ ಕಾಣಬಹುದು.

- The mysterious, dream-like imagery makes this a very strade scene, But dli painted it so realistically that it almost looks phtogeaphic-in fact, he called works "hand-painted dream photographs". By present ing an imaginary scene in such a life like way, he intended to blur the boundary between imagination and reality. He said he wanted his paint ings to Spread confusion, in order to "discredit completely the world of reality"(Rosie Dickins, MODERN ART, Page, 41). ಎಂದು ರೂಸ್ ಡಿಕಿನ್ಸ್

ಅವರು ಮಾರ್ಡನ್ ಆರ್ಟ್ ಪುಸ್ತಕದಲ್ಲಿ ಉಲ್ಲೇಖಿಸಿದ್ದಾರೆ.

ನಿಸರ್ಗದಿಂದ ನಕಲು ಮಾಡುತ್ತಿದ್ದ ಪದ್ಧತಿಯಿಂದ ಹೊರತಾಗಿ ಸ್ಟೂಡಿಯೋ ಒಳಗೆ ಕಲಾವಿದನಿಗೆ ಅಂತರಂಗದಿಂದ ಬರುತ್ತಿದ್ದ ಅದ್ಭುತವಾದ ಆಲೋಚನೆಗಳ ಅಭಿವ್ಯಕ್ತಿ ಎಂದೂ ಪ್ರಕೃತಿಯ ಸೃಷ್ಟಿಯನ್ನು ಮೀರಿದ ಹೊಸತಾದ ಸೃಷ್ಟಿ ಎಂದೂ ಇದರಲ್ಲಿ ಕಾಣಬಹುದು. ಒರಟಾದ, ಕೊಳಿತು ಹೋದ, ತಿರುಚಿದ, ಬಾಡಿದ, ಮರದಂತೆ ನಿಸ್ಸಾರವಾದ, ಒಣಗಿದ ರೂಪಗಳೆಂದು ಕರೆಯಲಾಗಿದೆ.

- ಸರ್ರಿಯಾಲಿಸಂ ನಲ್ಲಿ ಕಂಡು ಬರುವ ಕ್ರೂರ, ಕಠೋರ, ಪೀಶಾಚಿ ರೂಪದ, ಸ್ವೇಚ್ಛಾಕ್ರೀಡೆಯ, ಖಿನ್ನತೆಯ, ಕುರೂಪದ, ಕೊಳಕುತನದ, ಅಸಂಗತ, ಅಸಂಬದ್ದವಾದ ವಿಕಟ ಚಿತ್ರಗಳು ಕೆಲವರ ಕಲಾಕೃತಿಗಳಲ್ಲಿ ಕಾಣಬಹುದು ಇವುಗಳು ಕಳೆದ ದಶಕದ ಅಂತ್ಯದಲ್ಲಿಯೆ ನಿಗೂಢಾತ್ಮಕ ಚಿತ್ರಗಳು ಮತ್ತು ಸುಂದರಗೊಳಿಸಿದ ಪ್ರಮಾಣಬದ್ಧ ದೇಹಗಳು ರೆಕ್ಕೆಗಳೊಂದಿಗೆ ಹಾರಾಡುತ್ತಿರುವಂತೆ, ತೇಲುತ್ತಿರುವಂತೆ ಇವು ಕನಸಿನ ಲೋಕದ ಚಿತ್ರಗಳು ಸಹ ಇದರಲ್ಲಿ ಕಾಣುತ್ತವೆ.

- ಈ ಪಂಥ ಮಾನವ ವಿಶ್ವದ ಸಂಬಂಧತೆಯ ವಿಶೇಷ ಲಕ್ಷಣಗಳ ಮೇಲೆ ದಾಳಿ ಮಾಡಿತು. ಸರ್ರಿಯಲಿಸಂ ಪಂಥ ಎರಡು ವಿಭಾಗಗಳಾಗಿ ಬೆಳೆದು, ಒಂದು ಭ್ರಾಂತಿ ಮತ್ತು ಇನ್ನೊಂದು ಕನಸು.

- ಅರೆ ನಿದ್ರಾ ಸ್ಥಿತಿಯನ್ನು ತಲುಪಿದರೆ, ಹೊರ ಜಗತ್ತನ್ನು ಅಳಿಸಿ ಹಾಕಿ, ಚಿಂತನ ಶಕ್ತಿಯ ಅಡತಡೆಗಳಿಲ್ಲದೆ ಶ್ರೇಷ್ಠ ಮಟ್ಟದ ನೈಜತೆಯ ಅದ್ಭುತ ಲೋಕದಲ್ಲಿ ನೆಲೆಸಬಹುದು. ಕನಸಿನ

ಲೋಕಕ್ಕೆ ಸಮಾನವಾದ ಈ ಲೋಕ ನಮ್ಮ ನಮ್ಮ ಎಚ್ಚರಿತ ಮನಸ್ಸಿಗೆ ಎಂದೂ ದಕ್ಕುವುದಿಲ್ಲ ಎಂಬುದನ್ನು ಸರ್‍ರಿಯಲಿಸ್ಟ್‌ಗಳ ಕಲಾವಿದರಲ್ಲಿ ಕಂಡುಕೊಳ್ಳಬಹುದು.

- ಸಿಗ್ಮಂಡ ಫ್ರಾಯ್ಡ್ ಸಿದ್ಧಾಂತದಲ್ಲಿ ವೈಜ್ಞಾನಿಕ ದೃಷ್ಟಿಕೋನವಿದ್ದರೂ ಸಂಸ್ಕೃತಿ ವಿರೋಧಿ ವಿಚಾರವೂ ದೃಷ್ಟಿಗೋಚರವಾಗುತ್ತದೆ. ಪಶು ಪ್ರವೃತಿಯ ವಿರೋಧದಲ್ಲಿಯೇ ಸಂಸ್ಕೃತಿಕ ಪ್ರವೃತಿಯಿಂದಲೆ ಕಲೆ ಹುಟ್ಟುತ್ತದೆ.
- ಇಂಥ ರಹಸ್ಯವಾದಿಗಳ ಚಿತ್ರಗಳಲ್ಲಿರುವ ಪ್ರತಿಮೆಗಳು ಕಲೆಯಲ್ಲಿ ತಾಂತ್ರಿಕತೆಗಾಗಿ ಬಳಕೆಯಲ್ಲಿ ಬರುತ್ತವೆ. ಆದರೆ ನಮ್ಮ ತಾಂತ್ರಿಕ ಕಲೆ ಕಟ್ಟುನಿಟ್ಟಾಗಿ ಅಂಥ ಪ್ರತಿಮೆಗಳನ್ನು, ಬಣ್ಣಗಳನ್ನು ಅನುಭವದ ರೀತಿಗಳನ್ನು ಬಳಸಿಕೊಂಡಿದ್ದಾರೆಂದು ಹೇಳಲಿಕ್ಕೆ ಬರುವದಿಲ್ಲ ಕಲಾವಿದರು Aesthetics ಮತ್ತು Beautyಗೆ ಹೆಚ್ಚಿನ ಮಹತ್ವ ಕೊಡುತ್ತಿರುವದ್ದರಿಂದ ಕಲೆಗೆ ಪೂರಕವಾದಂತಹ ವರ್ಣಗಳನ್ನೇ ಬಳಸಿಕೊಂಡಿರುವುದು ಕಂಡುಬರುತ್ತದೆ. ಇಂಥಲ್ಲಿ ತಾಂತ್ರಿಕತೆ ಮಾಯವಾಗಿ "ಫ್ಯಾಂಟೈಸಿ" ಹುಟ್ಟಿಕೊಂಡಿರುತ್ತದೆ. ತಂತ್ರ ಧರ್ಮಕ್ಕಿಂತ ಮನಃಶಾಸ್ತ್ರಕ್ಕೆ ಕ್ರಿಯೆಯಲ್ಲಿ ತೊಡಗಿದ ಎಲ್ಲರ ಮನಸ್ಥಿತಿಯೂ ರಹಸ್ಯಾತ್ಮಕ ಮಂಡಲದಲ್ಲಿಯೇ ಇರುತ್ತದೆ. ಆದ್ದರಿಂದ ವಿಕೃತಿಯ ಲಕ್ಷಣಗಳು ಇಂಥವರಲ್ಲಿ ಎದ್ದು ಕಾಣಿಸುತ್ತದೆ. ಇದ್ದಕ್ಕಾಗಿಯೇ ಸಿಗ್ಮಂಡ ಫ್ರೈಯಿಡ್ ಇಂಥವರೆಲ್ಲರೂ "ನ್ಯೂರಾಸಿಸ್" ರೋಗದಿಂದ ಪೀಡಿತರಾಗಿರುತ್ತಾರೆಂದು ಬರೆದಿರಬೇಕು.

ಭಾವನೆಗಳು ನಿಜವಾಗಿ ನಡೆಯುವ ರೀತಿಯನ್ನು ಒಬ್ಬ ವ್ಯಕ್ತಿ, ಶುದ್ಧ, ಅನಿಯಂತ್ರಿತ ಮನಸ್ಸಿನ ಶಕ್ತಿಯ ಮೂಲಕ ವ್ಯಕ್ತಪಡಿಸುವ ರೀತಿ ಚಿಂತನ ಶಕ್ತಿಯ ಯಾವುದೇ ಹಿಡಿತವಿಲ್ಲದೆ, ಸೌಂದರ್ಯದ ಅಥವಾ ನೈತಿಕ ಹೊಣೆಗಾರಿಕೆಗಳಿಂದ ಸಂಪೂರ್ಣ ಹಿತವಾಗಿ ಅಪ್ರಜ್ಞಾ ಭಾವನೆಯೊಂದರಿಂದಲೇ ನಿರ್ದೇಶಿತವಾಗಿ, ಉತ್ತಮ ಮಟ್ಟದವು ಎಂದು ನಂಬಿಕೆಗೀಡಾಗಿರುವ ಈ ಹಿಂದೆ ಕಡೆಗಣಿಸಿರುವ ಕೆಲವು ಮಾನಸಿಕ ಸಂಬಂಧಗಳು ಕನಸುಗಳ ಸರ್ವವ್ಯಾಪ್ತಿ ಶಕ್ತಿ ಮತ್ತು ನಿರಾಶಕ್ತಿ ಭಾವನೆಗಳ ಮೇಲೆ ಸರ್‍ರಿಯಲಿಸಂ ಅವಲಂಬಿಸಿದೆ.

ಕೆಂಪು ಬಣ್ಣದ ಆಕಾಶದಲ್ಲಿ ಹಾರುವ ಬಂಡೆ, ಯಾವುದೇ ಒಂದು ಪ್ರದೇಶದಲ್ಲಿ ಇರಬೇಕಾದ ವಸ್ತು ಪ್ರಾಣಿಗಳನ್ನು ಇನ್ನೆಲ್ಲಿಯೋ ತಂದಿರಿಸಿ ತೋರಿಸುತ್ತಾರೆ. ಭ್ರಾಂತ ಸ್ವಪ್ನಲೋಕವನ್ನು ಸೃಷ್ಟಿಸುತ್ತದೆ. ಕಣ್ಣಿಗೆ ಕಾಣುವ ಜಗತ್ತಿಗಿಂತ ಈ ತರದ ಸುಪ್ತಚೈತನ್ಯದ ಕಲಾರೂಪವು ಮೇಲ್ಮಟ್ಟದ್ದು ಎಂಬುದು ಸರ್‍ರಿಯಲಿಸಂ ನ ಕಲಾವಿದನ ನಂಬುಗೆ, ಅದು ಕೇವಲ ಕಣ್ಣಿಗೆ ತೋರುವ ಸೀಮಿತವಾದುದಲ್ಲ. ಅದು ಕನಸ್ಸಿನ ಘಟನೆ, ಅವಾಸ್ತವಿಕ ಮನಸ್ಸಿನ ಆಳವಾದ ಪದರಗಳಲ್ಲಿ ಹುದುಗಿರುವ ಅತಾಂಕವಾದ ವಿಷಯ, ಆಕೃತಿಗಳಿಗೆ ಕಲ್ಪನೆಗಳನ್ನೆ ಚಿತ್ರ ಮಾತು ಮೊದಲಾದ ಮಾಧ್ಯಮಗಳ ಮೂಲಕ ಪ್ರಕಟಿಸುವ ಒಂದು ಕಲಾಪಂಥವು ಸರ್‍ರಿಯಲಿಸಂ ಎಂಬುದಾಗಿ ಅವರ ವಕ್ತಾರ ಅಂದರೆ ಬ್ರೆಟನ್‌ನ ಘೋಷಣೆ, ಎಲ್ಲಾ ಮತೀಯ ಹಾಗೂ ವಿಚಾರಗಳ ಕಲ್ಪನೆಗಳಿವೆ. ಸ್ಪಿಂಕ್ಸ್, ವರಾಹ, ನರಸಿಂಹ ಮೊದಲಾದ ಸೃಷ್ಟಿಗಳು, ವಿಚಿತ್ರರೂಪಿ ದೇವದೂತರು, ಸ್ವರ್ಗಾರೋಹಣ ಮುಂತಾದ ವಿಲಕ್ಷಣ ವಿಚಾರಗಳನ್ನು

ಕೇಳಿದ್ದೇವೆ. ಇವುಗಳೂ ಸರ್‍ರಿಯಲಿಸಂನ ಪಂಥಕ್ಕೆ ಸೇರಬಹುದು ಎಂದು ಶಂಕೆ ಮೂಡುತ್ತದೆ. ಬದುಕಿನ ತತ್ವಕ್ಕೆ ಸಂಬಂಧಿಸಿದ ವಿಚಾರಗಳು ಮತ್ತು ಶಕ್ತಿಯು ಸ್ವಪ್ನ ಪ್ರಪಂಚದಲ್ಲೂ ಇವೆ ಎಂಬುದು ಸರ್‍ರಿಯಲಿಸ್ಟ್‌ರ ನಂಬಿಕೆ. ಆದುದರಿಂದ ಅವರು ಕನಸಿನ ವೈಚಿತ್ರ್ಯಗಳಿಗೂ ನಿಲಕ್ಷಣ ಕಲ್ಪನೆಗಳನ್ನು ಪ್ರಾಧಾನ್ಯತೆ ನೀಡಿದರು.

ಗೊತ್ತು ಗುರಿಯಿಲ್ಲದ ವಸ್ತುಗಳನ್ನು ಅಂಟಿಸಿ ಕನಸಿನಂತಹ ಕೃತಿಗಳನ್ನು ಕಾಣಬಹುದು ಮನಷ್ಯನೂ ಅಲ್ಲ. ಮೃಗಪಕ್ಷಿಯೂ ಅಲ್ಲ ಎಂಬಂತೆ ವಿಚಿತ್ರಾಕೃತಿಗಳನ್ನು ನೋಡಬಹುದು. ಬುದ್ಧಿ ಸ್ವಾಸ್ಥವಿಲ್ಲದ ಹುಚ್ಚನ ಕೃತಿಗಳು ಎಂದು ಭಾಸವಾಗುತ್ತೆವೆ. ಕಥೆ ಸಾಹಿತ್ಯಗಳಲ್ಲೂ, ಪುರಾತನ ಕಾಲದಿಂದ ಕಣ್ಣಿಗೆ ಕಾಣಸಿಗದ ವಸ್ತು ಹಾಗೂ ವಿಚಾರಗಳ ಕಲ್ಪನೆಗಳಿವೆ. ಕಲಾವಿದನ ಮನೋವಿಕಾಸಕ್ಕೆ ಮೂಲಾಧಾರವಾಗಿ ಕಲಾಕೃತಿಗಳ ವಿಚಾರ ತತ್ವಗಳಿಗೆ ವಿಭಿನ್ನತೆಯ ತರ್ಕ ಮಾಡಬಹುದು. ಸಹಜ ಅನುಭವಗಳಿಂದ ಅತೀತವಾದ ಅನುಭವದ ಅಭಿವ್ಯಕ್ತಿಯೇ "ಸರ್‍ರಿಯಲಿಸಂ" ಕಲೆಗಾರರ ಉದ್ದೇಶ. ರಹಸ್ಯಮಯವಾದಂಥ ವಿಚಿತ್ರ ಲೋಕವೇ ನಮ್ಮ ಕಣ್ಣ ಮುಂದೆ ನಿಂತಂತಾಗುವುದು. ಕಲಾವಿದನ ಆಂತರಿಕ ಒಳಮನಸ್ಸಿನ ಬಾಹ್ಯವಾಗಿ ಕಲ್ಪಕೃತಿಗಳ ಮೂಲಕ ಕಾಣಬಹುದು.

* * *

# ಅಧ್ಯಾಯ: ನಾಲ್ಕು

## ಸರ್‍ರಿಯಲಿಸಂ ಪಂಥದ ಕಲಾಕೃತಿಗಳ ವಸ್ತುವಿಷಯ ಮತ್ತು ವರ್ಗೀಕರಣ

೧. ಸಾಮಾಜಿಕ

೨. ರಾಜಕೀಯ

೩. ನೈಸರ್ಗಿಕ

೪. ವೈಯಕ್ತಿಕ ಚಿತ್ರಗಳು

## ಅಧ್ಯಾಯ : ನಾಲ್ಕು

# ಸರ್ರಿಯಲಿಸಂ ಪಂಥದ ಕಲಾಕೃತಿಗಳ ವಸ್ತುವಿಷಯ ಮತ್ತು ವರ್ಗೀಕರಣ

ಪಾಶ್ಚಾತ್ಯ ಕಲೆಯ ಪ್ರಭಾವದ ಭಾರತೀಯ ಕಲಾ ಪ್ರಕಾರ ಹಾಗೂ ಇತ್ತೀಚಿನ ಸ್ವತಂತ್ರ ಭಾರತದ ನವ್ಯ ಕಲೆಯ ಪ್ರಕಾರ ಇವೆಲ್ಲವನ್ನು ಗಮನಿಸುತ್ತಾ ಬಂದಾಗ, ಕಲೆ ಆಯಾ ಕಾಲದ ಆಯಾ ದೇಶದ ಬೇಡಿಕೆಗಳನ್ನು ಪೂರೈಸುತ್ತ ಅಭಿವ್ಯಕ್ತಿಯನ್ನು ಪಡೆಯುತ್ತಾ ಹೊಸ ಹೊಸ ಅರ್ಥವನ್ನು ಹುಡುಕುತ್ತಾ ಹೊಸ–ಹೊಸ ರೂಪಗಳನ್ನು ಕೊಡುತ್ತಾ ಬಂದಿರುವುದನ್ನು ನೋಡಬಹುದಾಗಿದೆ. ಕರ್ನಾಟಕದಲ್ಲು ಹೀಗೆ ಸರ್ರಿಯಲಿಸಂ ಅಂಶಗಳುಳ್ಳ ಕಲಾಕೃತಿಗಳನ್ನು ಮತ್ತು ಅವುಗಳ ವಿಶೇಷ ಸ್ವತಂತ್ರವಾಗಿ ಅಭಿವ್ಯಕ್ತಪಡಿಸಲು ಪ್ರತಿಯೊಬ್ಬ ಕಲಾವಿದರು ತಮ್ಮದೇ ಆದ ಮಾರ್ಗಗಳನ್ನು ಕಂಡುಕೊಂಡಿದ್ದಾರೆ ಎನ್ನುವುದು ಇಲ್ಲಿ ತಿಳಿಯುತ್ತದೆ. ಒಂದು ಕಲಾಕೃತಿ ತನ್ನ ಅರ್ಥಸಾಧ್ಯತೆಗಳನ್ನು ನೋಡುಗನಿಗೆ ನಿಧಾನವಾಗಿ ಬಿಟ್ಟುಕೊಡುತ್ತದೆ. ಅಂತೆಯೇ ಪ್ರತಿನೋಟದಲ್ಲೂ ಹೊಸ–ಹೊಸ ಹೊಳಹುಗಳನ್ನು ಕಲಾಕೃತಿಯೊಂದು ನೀಡಬಹುದಾಗಿದೆ. ಆದರೆ ಸರ್ರಿಯಲಿಸಂ ಪಂಥದ ಸಂದರ್ಭವೇ ಬೇರೆ. ಸರ್ರಿಯಲಿಸಂ ಕಲಾಕೃತಿಗಳೂ ನೋಡಿದಾಕ್ಷಣ ನೋಡುಗರಲ್ಲಿ ಭಾವಗಳ ಉದ್ದೀಪನಗೊಳ್ಳುತ್ತವೆ. ತುಟಿಗಳಲ್ಲಿ ಕಿರುನಗೆಯ ಜೊತೆಗೆ, ವಿವಿಧ ಸಂಗತಿಗಳು ಕೆಲವೇ ಕ್ಷಣಗಳಲ್ಲಿ ಸಹೃದಯನ ಚಿತ್ರದಲ್ಲಿ ಹಾದುಹೋಗಬಹುದು.

ಮಾಧ್ಯಮಗಳು ವೇಗವಾಗಿ ಬೆಳೆಯುತ್ತಿರುವ ಈ ಯುಗದಲ್ಲಿ ಸರ್ರಿಯಲಿಸಂ ಚಿತ್ರಗಳ ಪಾತ್ರ ಪರಿಣಾಮಕಾರಿಯಾಗಿದೆ. ಈ ಹಿಂದೆ ಚಿತ್ರಕಲೆಗೆ ಹೀಗೆಯೇ ಇರಬೇಕೆಂಬ ಇತಿಮತಿಗಳಿದ್ದವು. ನಿರ್ಧಿಷ್ಟ ಚೌಕಟ್ಟುಗಳಿದ್ದವು. ಗಂಭೀರ ವಿದ್ವಾಂಸರ ಆಪತ್ತಿಗೆ ಅನಿಗುಣವಾಗಿ ಚಿತ್ರಕಲೆ ರೂಪುಗೊಳ್ಳುತ್ತಿತ್ತು. ಆದರೆ ಇಂಥ ಕಟ್ಟುಪಾಡುಗಳಿಲ್ಲದೆ ಸರ್ರಿಯಲಿಸಂ ಚಿತ್ರಗಳ ಪರಿಧಿ ಅತ್ಯಂತ ವಿಶಾಲವಾದುದು ಎಂದು ಹೇಳಬಹುದಾಗಿದೆ. ಕರ್ನಾಟಕದ ಸರ್ರಿಯಲಿಸಂ ಕಲಾಕೃತಿಗಳನ್ನು ಅಧ್ಯಯನದ ದೃಷ್ಟಿಯಿಂದ

೧. ಸಾಮಾಜಿಕ

೨. ರಾಜಕೀಯ

೩. ನೈಸರ್ಗಿಕ

೪. ವೈಯಕ್ತಿಕ ಚಿತ್ರಗಳು

ಈ ರೀತಿಯಲ್ಲಿ ನಾಲ್ಕು ಬಗೆಯಾಗಿ ವರ್ಗೀಕರಿಸಿಕೊಳ್ಳಲಾಗಿದೆ ಹೀಗೆ ಒಂದೊಂದಾಗಿ ನೋಡುತ್ತಾ ಹೋಗೂಣಾ.

**೧. ಸಾಮಾಜಿಕ ಚಿತ್ರಗಳು**

ಕಲಾವಿದರು ಸಮಾಜದ ಒಂದು ಅಂಗವೆಂದು ಮೊದಲಿನಿಂದಲೂ ಹೇಳುತ್ತಾ ಬಂದಿರುವುದು ರೂಡಿಯಲ್ಲಿದೆ. ಕಲಾವಿದರಾದವರಿಗೆ ಬರಿ ತಮ್ಮ ಅಭಿವ್ಯಕ್ತಿ ಮುಖ್ಯವಲ್ಲ. ಸಾಮಾಜಿಕ ಆಗು ಹೋಗುಗಳ ಬಗ್ಗೆಯೂ ಗಮನವಿರಬೇಕಾಗುತ್ತದೆ. ಏಕೆಂದರೆ ಜನ ಸಾಮಾನ್ಯರಿಗೆ ಮತ್ತು ಅನಕ್ಷರಸ್ತರಿಗೆ ಓದಲು ಬರದವರಿಗೆ ಒಂದು ಚಿತ್ರದ ಮೂಲಕ ಸಾಮಾಜಿಕ ವಿಷಯಗಳನ್ನು ಮುಟ್ಟಿಸಬಹುದಾಗಿದೆ. ಇದಕ್ಕೆ ನಾವು ಇಲ್ಲಿ ಆದಿಮಾನವನು ರಚಿಸಿರುವ ಚಿತ್ರಗಳನ್ನು ನೆನಪಿಸಿಕೊಳ್ಳುವುದು ಸೂಕ್ತವಾಗುತ್ತದೆ. ಕಲಾವಿದರು ಹೇಗೆ ತಮ್ಮ ಕಲಾಕೃತಿಗಳಲ್ಲಿ ಸಾಮಾಜಿಕ ವ್ಯವಸ್ಥೆ ಮತ್ತು ಅವುಗಳ ಭಾಗವಾದ ಜಲಮಾಲಿನ್ಯ, ವಾಯುಮಾಲಿನ್ಯ, ಶಬ್ಧಮಾಲಿನ್ಯ ದಂತಹ ಅನೇಕ ಸಾಮಾಜಿಕ ಸಮಸ್ಯೆಗಳ ಕುರಿತು ಚಿಂತಿಸಿ ಅವುಗಳನ್ನು ತನ್ನದೇ ಅದ ವಿಚಾರಕ್ಕೆ ಒಳಪಡಿಸಿ ಅವುಗಳನ್ನು ಚಿತ್ರಗಳ ಮುಖಾಂತರ ವ್ಯಕ್ತಪಡಿಸಬಹುದು. ಈ ರೀತಿಯಾಗಿ ಇಲ್ಲಿ ಕೆಲಸ ಮಾಡಿದ ಸರ್‍ರಿಯಲಿಸಂ ಪಂಥದ ಅಂಶಗಳುಳ್ಳ ಕಲಾಕೃತಿಗಳನ್ನು ರಚಿಸುವ ಕಲಾವಿದರಾದ ಸುನಿಲ್ ಮಮದಾಪುರ, ನಿಂಗರಾಜ್ ಪಾಟೀಲ್, ಗುರುಸಿದ್ದಪ್ಪನವರು, ರುದ್ರಗೌಡ ಇಂಡಿ ಮುಂತಾದವರ ಕೆಲವು ಕಲಾಕೃತಿಗಳನ್ನು ನೋಡಬಹುದಾಗಿದೆ.

೧. 'ಸೆರ್‍ರಿಯಲಿಸಂ' ಪಂಥವನ್ನು ಬಲವಾಗಿ ತಮ್ಮ ಕಲಾಕೃತಿಯ ಭಾಗವಾಗಿಸಿಕೊಂಡವರೆಂದರೆ ಸುನೀಲ್ ಮಮದಾಪುರ ಅವರು ಕಲಾಕೃತಿಯ ಅಂತರಾಳವನ್ನು ಮನಃಶಾಸ್ತ್ರೀಯ ಹಿನ್ನೆಲೆಯ ವ್ಯವಸ್ಥೆಯನ್ನು ರೂಪಿಸುವಲ್ಲಿ ಯಶಸ್ವಿಯಾದ ಕಲಾವಿದರು ಇವರು ಅವರ ಬದುಕಿನ ಅನುಭವಗಳ ದಟ್ಟತೆ ಬರೋಡದಲ್ಲಿನ ಹೊಸ ನೋಟಗಳ ಪ್ರಭಾವದಿಂದ ಅವರ ಚಿತ್ರಕಲೆ ಕಲಾ ಜಗತ್ತಿನ ದಿಟ್ಟತನದ ನಡೆಯಾಯಿತು. ಸಾಮಾಜಿಕ ವಸ್ತು ವೈವಿಧ್ಯದಿಂದ ಸುನೀಲ್ ಮಮದಾಪುರ ಅವರು ಬಹುಬೇಗನೆ ಜನಪ್ರಿಯಗೊಂಡರು. ಈ ಒಂದು ಚಿತ್ರ ಮನುಷ್ಯನ ಭಾವ ತರಂಗಗಳನ್ನು ಅಲೆಯಾಗಿ ಎಬ್ಬಿಸುವ ಮೂಲಕ ನಿರ್ಭಾವುಕ ಅನಾಮಿಕತೆಯೊಂದನ್ನು ಅನಾವರಣಗೊಳಿಸುತ್ತದೆ. ಅಕ್ರಾಲಿಕ ಮಾಧ್ಯಮದಲ್ಲಿ ರೂಪಗೊಂಡ ಇದು ನಿಜನೋಟದ ಛಾಯೆಯನ್ನು ನೇರವಾಗಿ ಹೋಲುತ್ತದೆ. ಬದುಕೆಂಬ ಕಡಲಿನಲ್ಲಿ ಮನುಷ್ಯ ಅನುಭವಗಳ ಹಡಗು ಈ ತೇಲುವ ಮುಳಗುವ ಆಟದಲ್ಲಿ ತನ್ನತನದ ಹುಡುಕಾಟ ಸದಾ ಅವನಲ್ಲಿ ನೀರವ ಮೌನವೊಂದನ್ನು ನಿರ್ಮಿಸುತ್ತದೆ. ಈ ಬದುಕೆಂಬ ಕಡಲಿನಲ್ಲಿಯೇ ತನ್ನ ಬಿಂಬವನ್ನು ಹುಡುಕಬೇಕು ಅದರೊಳಗಿನ ಜಲಚರಗಳು ಅರಿವು, ಅವುಗಳ

ಮೂಖ ಭಾವ ಎಲ್ಲವೂ ವೈವಿಧ್ಯಮಯವಾಗಿದೆ. ಚಿತ್ರದಲ್ಲಿ ಬಳಸಿಕೊಂಡ ಪ್ರತಿಯೊಂದು ವಸ್ತುಗಳೂ ಒಂದೊಂದು ದೃಷ್ಟಿಕೋನಗಳನ್ನು ಹುಟ್ಟು ಹಾಕುತ್ತವೆ. ನೀಲಿ ವರ್ಣದ ನೀರಲ್ಲಿ ಮೂಡುವ ಬಿಂಬ ಆನೆಯಾಗಿ, ಚಿಮಣಿಯ ಹೊಳಪಾಗಿ ಚಂದಿರ, ವಿಚಾರ ಶೂನ್ಯವಾದ ಮುಖತಲೆಯ ಪಂಜರ ನವಿರಾಗಿ ತೇಲುವ ಮೋಡಗಳ, ಹೊಳಪಾಗಿ ಮಿನುಗುವ ಉಷೆ, ಬಣ್ಣಗಳ ಸಂಯೋಜನೆ ಎಲ್ಲವೂ ಅವರ ಸೃಜನಶೀಲತೆಯ ಕೈಗನ್ನಡಿಯಾಗಿದೆ.

೨. ಅಂತರಾಷ್ಟ್ರೀಯ ಮಟ್ಟದಲ್ಲಿ ಸುನೀಲ ಮಮದಾಪುರ ಅವರು ಜನಪ್ರಿಯವಾಗಲೂ ಸಾಧ್ಯವಾದದ್ದೇ ಈ ತರಹದ ಚಿತ್ರ ಕಲಾಕೃತಿಗಳಿಂದ ಅಕ್ರಾಲಿಕ್ ಮಾಧ್ಯಮದ ಈ ಕಲಾಕೃತಿ ಆಧುನಿಕ ಕಾಲದ ಮನುಷ್ಯನ ಉದ್ಧಟತನವೋ ಹೊಸ ಅನ್ವೇಷಣೆಯ ವ್ಯಾಮೋಹವೋ ಆದರೆ ಪ್ರಾಕೃತಿಕವಾಗಿ ಬಂದಿರುವ ಶಕ್ತಿಯಾಚೆಗಿನ ಶಕ್ತಿಯ ಬಗ್ಗೆ ಕುತೂಹಲ ಇಂದು ಹೆಚ್ಚಾಗಿದೆ. ಇಂದು ವಿಜ್ಞಾನ ಕ್ಷೇತ್ರದಲ್ಲಿ ಸಾಧಿಸಿರುವ ಅನ್ವೇಷಣೆಗಳು ಮನಷ್ಯನನ್ನು ಕೇವಲ ಜ್ಞಾನದ ಹಿಂದೆ ಓಡುವ ಯಂತ್ರಗಳಂತೆ ಮಾರ್ಪಡಿಸಿದ ಈ ಯಂತ್ರನಾಗರಿಕತೆಯ ಉದ್ಧಟತನಗಳೇ ಇಂದು ಪ್ರಕೃತಿ ಸ್ನೇಹಿಯಾದ ವಲಯವೊಂದರ ಬಟಾಬಯಲಾದ ರೂಪವನ್ನು ಕಾಣಿಸುತ್ತದೆ ಎನ್ನುವ ಹಾಗೆ ಈ ಚಿತ್ರ ಮಾನವ ನಿರ್ಮಿತ ವ್ಯವಸ್ಥೆಯನ್ನು ಗೇಲಿ ಮಾಡಿದಂತೆ ಮತ್ತು ವಾಸ್ತವ ಚಿತ್ರಣದ ಅನಾವರಣದ ವಸ್ತುವನ್ನು ಒಳಗೊಂಡಿದೆ. ಯಂತ್ರ ಮಾಧ್ಯಮದ ಭಾಗವಾದ ಮನುಷ್ಯ ಕೇವಲ ತಾನಷ್ಟೇ ಅಲ್ಲದೆ ತನ್ನ ಸುತ್ತಮುತ್ತಲಿರುವ ಎಲ್ಲ ವಲಯವನ್ನು ರಾಕೆಟ್‌ನಂತೆ ಉಡಾಯಿಸುವ ಮನಸ್ಥಿತಿಯುಳ್ಳವನಾಗಿದ್ದಾನೆ. ಇದು ನೇರವಾಗಿ ಕಲಾವಿದನೊಬ್ಬ ತನ್ನೊಳಗಿಂದಲೇ ತೋಡಿಕೊಳ್ಳುವ ವಿಡಂಬನೆ ನಮ್ಮೆಲ್ಲರನ್ನು ಅಪಹಾಸ್ಯಗೊಳಿಸಿದೆ ಎನಿಸುತ್ತದೆ.

೩. ಈ ಚಿತ್ರದಲ್ಲಿ ಅತೀ ಪ್ರಭಾವ ಮತ್ತು ನೇರವಾಗಿ ಚಾಟಿಯಂತೆ ಇಡಿ ಮಾನವ ಸಂಕುಲಕ್ಕೆ ಮರುಪ್ರಶ್ನೆ ಮಾಡುವಂತೆ ಕಲಾವಿದರು ಕಟ್ಟಿಕೊಟ್ಟಿದ್ದಾರೆ. ಮಾನವ ತನ್ನ ದುರಾಸೆಯೊಂದಿಗೆ ಭೂಲೋಕದಲ್ಲಿ ಸ್ವಾರ್ಥಿಯಂತೆ ಬದುಕು ನಡೆಸುತ್ತಾನೆ. ತನ್ನ ಸಂಪರ್ಕಕಕ್ಕೆ ನೀಲುಕಲು ವಾಹನಗಳನ್ನು ತಯಾರಿಸಿ ಅದಕ್ಕೊಂದು 'ಹಾರ್ನ್' ಶಬ್ದ ಕೂಡಿಸಿ ಶಬ್ದ ಮಾಲಿನ್ಯ ಮಾಡುವ ದುರಾಲೋಚನೆಗೆ ಪರಿಸರದ ಹಕ್ಕಿಗಳನ್ನು ಕೊಲ್ಲುವ ಮತ್ತು ಪಕ್ಷಿಗಳ ಸಂಕುಲವೇ ನಶಿಸಿ ಹೋಗುವ ರೀತಿಯಲ್ಲಿ ವಾಹನಗಳ ಶಬ್ದ ದಿನೆ ದಿನೆ ಹೆಚ್ಚುತ್ತಿದೆ ಎಂದು ಈ ಚಿತ್ರ ಮುಖಾಂತರ ಕಲಾವಿದರು ಕಟ್ಟಿಕೊಟ್ಟಿದ್ದಾರೆ. ಚಿತ್ರದಲ್ಲಿ ಎರೆಡು ಪಕ್ಷಿಗಳ ಬಾಯಿಗೆ ವಾಹನದ ಶಬ್ದದ ವಸ್ತುವೊಂದನ್ನು ಸಿಗಿಸುವ ರೀತಿಯಲ್ಲಿ ರಚಿಸಲಾಗಿದ್ದು ಆ ಮೂಲಕ ಹಕ್ಕಿಗಳ ಇಂಪಾದ ಧ್ವನಿಯನ್ನು ಕೃತಕವಾಗಿ ನಿರ್ಮಿಸಿದ ಶಬ್ದಗಳಿಂದ ಕೊಲ್ಲಲಾಗುತ್ತಿದೆ ಎನ್ನುವುದು ಗುರುಸಿದ್ದಪ್ಪ ನವರು ತಮ್ಮ ಅಕ್ರಾಲಿಕ್ ಮಾಧ್ಯಮದ ಕಲಾಕೃತಿಯಲ್ಲಿ ರಚಿಸಿದ್ದಾರೆ.

೪. ಈ ಚಿತ್ರದಲ್ಲಿ ಸಾಮಾನ್ಯವಾಗಿ ಚಿತ್ರಕಲೆ ಅನ್ನುವುದಕ್ಕಿಂತ ಅದೊದಂದು ಅರ್ಥಗರ್ಭಿತ ಶಬ್ದಭಂಡಾರಗಳ ಕೂಪವೇ ಸರಿ. ಕಲಾವಿದರು ಚಿತ್ರಿಸಬೇಕಾದ ಚಿತ್ರಕ್ಕೆ ವಿಚಾರಗಳನ್ನು ವಿಲೀನಗೊಳಿಸಿ

ಬಣ್ಣದೊಡನೆ ಬೆರೆಸಿ ಅರ್ಥಕ್ಕೆ ನಾನಾರ್ಥ ಬರುವ ರೀತಿಯಲ್ಲಿ ಚಿತ್ರಿಸುತ್ತಾರೆ. ಈ ಚಿತ್ರದಲ್ಲಿ ಕಂಡು ಬರುವ ಉದ್ದೇಶಗಳೆಲ್ಲವೂ ಒಂದೊಂದು ಕಥೇಯನ್ನು ಹೇಳಹೋಗುತ್ತವೆ. ಅದೆನೆಂದು ಸೂಕ್ಷ್ಮವಾಗಿ ಗಮನಿಸುತ್ತಾ ಹೋಗಬೇಕು. ಈ ಚಿತ್ರ ಅಕ್ರಾಲಿಕ್ ಮಾಧ್ಯಮದ್ದಾಗಿದ್ದು ಕಲಾವಿದರು ಇದರಲ್ಲಿ ಅದಮ್ಯ ಅರ್ಥವನ್ನು ಪೋಣಿಸಿದ್ದಾರೆ. ಅಮೂರ್ತ ಮತ್ತು ನಾನಾರ್ಥಗಳನ್ನು ಹೇಳತೊಡಗುವ ಈ ಚಿತ್ರದಲ್ಲಿ ಕಲಾವಿದರು ಒಂದು ರೀತಿಯ ನಿಗೂಡತೆ ವ್ಯಕ್ತಪಡಿಸುತ್ತಾರೆ. ಸಸ್ಯರಾಶಿಯ ಹೂವಿನ ಮಕರಂದವ ದಾಸವಾಳ ಹೂವಿನ ನ್ಯೂನ್ಯತೆಗಳನ್ನು ಮತ್ತು ಅದರಲ್ಲಿರು ಜಗತ್ತಿನ ಅಂದಕಾರವನ್ನು ಎಲ್ಲವನ್ನೂ ಗೌಣವಾಗಿ ಈ ಚಿತ್ರದಲ್ಲಿ ಅಳವಡಿಸಲಾಗಿದೆ. ಮಕ್ಕಳ ಬಾಲ್ಯದ ಅಚ್ಚರಿಯ ಜೊತೆಗೆ ಕೀಟಗಳ ದಿನಚರಿಯ ಜೀವನಶೈಲಿಯನ್ನು ಅದರ ಆಟೊಟಗಳನ್ನು ತೋರಿಸುತ್ತಾ ಹೂವಿನ ಅಳಿವಿನ ಅಂಚಿನ ವಾಕ್ಯಗಳನ್ನು ಮತ್ತು ಧರಗೆ ಉರಳಿದ ಸಸ್ಯರಾಶಿಯ ಬಗ್ಗೆ ಒಂದು ಚಿತ್ರಣವನ್ನು ಹೇಳಲು ಕಲಾವಿದ ಹೊರಟಿದ್ದಾನೆ. ಈ ಚಿತ್ರವು ಅನೇಕ ಅನೇಕ ಅರ್ಥಗಳನ್ನು ಕೊಡುವುದರ ಜೊತೆಗ ಭಾವನೆಗಳ ಲಹರಿಯನ್ನು ಎಳೆ ಎಳೆಯಾಗಿ ತೋರಿಸಲಾಗಿದೆ. ಮಕ್ಕಳಿಬ್ಬರು ಅಚ್ಚರಿಯಿಂದ ಬಾಗಿದ ತಲೆಗೆಳಗಾಗಿ ಭೂಮಿಗೆ ಅಪ್ಪಳಿಸಿದ ಹೂವನ್ನು ನೋಡುತ್ತಿರುವುದು ಸಸ್ಯರಾಶಿಯ ಅವನತಿ ಮಾರ್ಗವನ್ನು ಹೇಳುತ್ತಿದೆ. ಒಟ್ಟಾರೆ ಚಿತ್ರಣ ಸರ್ವಶಕ್ತನಾದ ಭಗವಂತ ರೂಪಿಸಿದ ಈ ಪ್ರಪಂಚದಲ್ಲಿ ಪರಿಸರದ ಭಾಗವಾದ ದಟ್ಟವಾಗಿ ಬೆಳದು ನಿಂತ ಸಸ್ಯರಾಶಿಯ ಹೂವಿನ ಪರಿಸ್ಥಿತಿಯನ್ನು ಮತ್ತು ಹೂವಿನ ಆಂತರಿಕ ಬಿಕ್ಕಟ್ಟುಗಳನ್ನು ಮಾನವ ಗ್ರಹಿಸಿಕೊಳ್ಳುವುದು ಹೇಗೆ ಬಾಲ್ಯಾದ ದಿನಗಳಲ್ಲಿ ಆಟಿಕೆಯಾಗಿ ಹೂವನ್ನು ಕೀಳುವುದು ಮತ್ತು ಕೀಟಗಳು ಹೂವನ್ನು ಸಾರ್ವಕಾಲಿವಾಗಿ ಸವಿಯನ್ನು ಹೀರುವ ಆಹಾರ ಪದ್ಧತಿಯಾಗಿ ರೂಪಿಸಿಕೊಳ್ಳುವ ನೈಸರ್ಗಿಕ ಕ್ರಿಯೆಯನ್ನು ನೈಜವಾಗಿ ಕಲಾವಿದರು ಈ ಕಲಾಕೃತಿಯಲ್ಲಿ ತೋರಿಸಿದ್ದಾರೆ.

೫. ಸರ್ರಿಯಲಿಸಂ ಪಂಥದ ಕಲಾಕೃತಿಗಳಿಗೆ ವಿಶೇಷವಾದ ಸ್ಥಾನಮಾನವನ್ನು ನೀಡುವುದರಲ್ಲಿ ರುದ್ರಗೌಡರು ಪ್ರಮುಖವಾದ ಕಲಾಕೃತಿಗಳನ್ನು ರಚಿಸುತ್ತಾರೆ. ಈ ಕಲಾಕೃತಿ ಅಕ್ರಾಲಿಕ್ ಮಾಧ್ಯಮದ್ದಾಗಿದ್ದು ಹೆಣ್ಣು ಮತ್ತು ನೀರು ಇವುಗಳ ರೂಪಕವಾಗಿ ಚಿತ್ರಿಸಿರುವ ಮನಸ್ಸಿನ ಆಳದ ಭಾವನೆಗಳನ್ನ ಈ ಪಂಥದ ಕಲಾಕೃತಿಯಾಗಿ ರೂಪಗೊಂಡಿದೆ. ಒಬ್ಬ ಹೆಣ್ಣು ಮನುಷ್ಯನ ಅಸ್ತಿತ್ವವಾಗಿ ನಿರಂತರ ಬದುಕಿನ ಚಲನೆಯಲ್ಲಿ ಎದುರುಗೊಳ್ಳುವ ನೂರಾರೂ ತಲ್ಲಣಗಳನ್ನು ಮತ್ತು ಮುಂದೆ ನಡೆಯಬೇಕಾದ ದಿಟ್ಟ ನಡೆಯನ್ನು ಈ ಕಲಾಕೃತಿ ಹೊಳಹುಗಾಣಿಸುತ್ತದೆ. ಈ ಪಂಥದ ಚಿತ್ರಕಲಾಕಾರರು ರೂಪಿಸಿಕೊಂಡ ಕಲ್ಪಾನ ಜಗತ್ತು ಬಣ್ಣಗಳಲ್ಲಿ ಮೂಡುವ ಸಂದರ್ಭದಲ್ಲಿ ವಿಶೇಷವಾದ ಮತ್ತು ವಯಕ್ತಿವಾದ ಅನೇಕ ಗುರುತುಗಳನ್ನು ಈ ಚಿತ್ರ ನೀಡುತ್ತದೆ. ಒಂದು ಹೆಣ್ಣು ತನ್ನ ಕಂದಮ್ಮನ ಬದುಕಿನಲ್ಲಿ ಎಷ್ಟು ಮುಖ್ಯ ಪಾತ್ರವನ್ನು ವಹಿಸುತ್ತಾಳೆ ಮತ್ತು ಅವಳು ಬದುಕಿನಲ್ಲಿ ಎದುರುಗೊಳ್ಳುವ ಕಷ್ಟಗಳಿಗೆ ಹೇಗೆ ದಿಟ್ಟತನದಿಂದ ಮುಂದೆ ಸಾಗುತ್ತಾಳೆ ಎಂಬುದನ್ನು ಈ ಚಿತ್ರ ಕಾಣಿಸುತ್ತದೆ. ಹೆಣ್ಣಿನ ನಿಂತ ನಿಲುವು ಅವಲ ದಿಟ್ಟತನದ ಕುರುಹುವಾದರೆ ಒಂದು ತಟ್ಟೆಯಲ್ಲಿ ನಿಂತಿರುವ

ರೂಪಕ ಈಡಿ ಬದುಕಿನಲ್ಲಿ ನಿಂತ ಅನುಭವ ಕಲಾರಸಿಕನಿಗೆ ಈ ಚಿತ್ರದ ಮೂಲಕ ಆಗುತ್ತದೆ. ತಾಟಿನಲ್ಲಿ ಗುರುತಿಸಿರುವ ಕಲ್ಲುಗಳು ಅವಳ ಬದುಕಿನಲ್ಲಿರುವ ನೂರಾರೂ ಕಷ್ಟಗಳನ್ನು ಪ್ರತಿನಿಧಿಸುತ್ತವೆ. ಅವಳು ನಿಂತಿರುವ ಕಟ್ಟಿಗೆ ಆಧಾರದ ಟೇಬಲ್ ಅವಳ ಅಸ್ತಿತ್ವದ ಮತ್ತು ಅವಳ ಬದುಕಿನ ನೆಲೆಯಾಗಿರುವ ಆಶ್ರಯ ತಾಣವನ್ನು ಪ್ರತಿನಿಧಿಸುತ್ತದೆ. ಅಲ್ಲಿ ಕಟ್ಟಿರುವ ಬಟ್ಟೆ ತೊಟ್ಟಿಲು ಮಗುವನ್ನು ಆರೈಕೆ ಮಾಡುವ ರೂಪಕವಾಗಿದೆ. ಒಂದು ಹೆಣ್ಣು ಕೇವಲ ಹೆಣ್ಣಾಗುರುವುದಿಲ್ಲ ಮಕ್ಕಳಿಗೆ ತಾಯಾಗಿ, ಗಂಡನಿಗೆ ಪ್ರೀತಿಯ ಸತಿಯಾಗಿ, ಅಣ್ಣ ತಮ್ಮರಿಗೆ ಅಕ್ಕರೆಯ ಸಹೋದರಿಯಾಗಿ ಸಮಾಜದ ಅಂಕುಡೊಂಕುಗಳನ್ನು ತಿದ್ದುವ ಕರುಣಾಮಯಿಯಾಗಿ ಕುಟುಂಬವನ್ನೆ ಹೊತ್ತು ನಡೆಸಬಲ್ಲ ಕ್ರೀಯಾಶೀಲೆಯಾಗಿ ಕಾರ್ಯನಿರ್ವಹಿಸಬಲ್ಲಳು ಎಂಬುದನ್ನು ಈ ಚಿತ್ರ ಮನಪೂರ್ವಕವಾಗಿ ಬಿಂಬಿಸುತ್ತದೆ.



೬. ವ್ಯಕ್ತಿಗತ ಅನುಭಾವದ ನೆಲೆಗೆ ಈ ಪಂಥ ನೀಡಿದ ಮಹತ್ವ ತುಂಬ ಮುಖ್ಯವಾದದ್ದು ಅನುಭಾವದ ರೂಪಕವಾಗಿ ಬಣ್ಣವನ್ನು ಅಚ್ಚುಕಟ್ಟಾಗಿ ಬಳಸಿಕೊಳ್ಳುವುದರಲ್ಲಿ ರುದ್ರಗೌಡ ಇಂಡಿಯವರು ಈ ಚಿತ್ರದಲ್ಲಿ ಸಮರ್ಥರಾಗಿದ್ದಾರೆ. ಈ ಪಂಥದ ಆಶಯಗಳಿಗೆ ಮೂಲವಾದ ಬೆಲೆಯನ್ನು ಸಲ್ಲಿಸುವುದರಲ್ಲಿ ಕಲಾವಿದರು ಈ ಚಿತ್ರದ ಮೂಲಕ ಯಶಸ್ವಿಯಾಗಿದ್ದಾರೆ. ಬಣ್ಣದ ಬಳಕೆ ಸೃಜನಶೀಲವಾಗಿ ರೂಪಗೊಂಡಾಗ ಮಾತ್ರ ಅನುಭಾವ ಲೋಕ ಕಣ್ಣ ಮುಂದೆ ಬರಲು ಸಾಧ್ಯ. ಅದು ಕ್ಯಾನ್ವಾಸ್ ಮೇಲೆ ಅಚ್ಚಾಗುವಾಗ ಕಲಾವಿದನ ಉದ್ದೇಶ ಅಪ್ರಸ್ತುತವಾಗಿ ಮನಸ್ಸಿನಾಳದ ಚಿತ್ರಣ ಬಣ್ಣಗಳ ಮೂಲಕ ಮೂಡುವುದು. ಇದನ್ನು ಈ ಚಿತ್ರ ಸಮರ್ಥವಾಗಿ ಬಿಂಬಿಸುತ್ತದೆ. ನೀಲಿ ಆಗಸದ ಮೋಡಗಳ ಆಚೆಗಿನ ಲೋಕವೊಂದನ್ನು ಕಲಾರಸಿಕನು ಗ್ರಹಿಸುವುದರಲ್ಲಿ ಈ ಕಲಾವಿದನ ಪಾತ್ರ ಯಶಸ್ವಿಯಾಗಿದೆ. ಚಿತ್ರದಲ್ಲಿ ಬರುವ ಏಕವ್ಯಕ್ತಿ ಪ್ರತಿಯೊಬ್ಬನು ತನ್ನೊಳಗಿನ ಸತ್ಯವನ್ನ ತಾನೇ ಕಂಡುಕೊಳ್ಳುವ ರೂಪಕವನ್ನು ಪ್ರತಿನಿಧಿಸುತ್ತದೆ. ಬಣ್ಣದ ಚದುರಂಗದ ಆಕಾರದ ಕೋಣೆಗಳು ಪ್ರತಿಯೊಬ್ಬನು ಸತ್ಯದ ಹುಡುಕಾಟದ ಹಾದಿಯಲ್ಲಿ ವಯಕ್ತಿಕವಾಗಿ ಹೆಜ್ಜೆ ಹೆಜ್ಜೆಗು ಹೊಸ ಹೊಸ ಬಣ್ಣದ ಅನುಭವಗಳನ್ನ ಪಡೆಯುತ್ತಾನೆ. ಎಂಬುದನ್ನು ಚಿತ್ರ ನಿರೂಪಿಸುತ್ತದೆ. ಮನಸ್ಸಿನ ಸಿಮೋಲಂಘನೆ ಗುಣವನ್ನು ಈ ಚಿತ್ರ ಪ್ರತಿನಿಧಿಸುತ್ತದೆ. ಅನುಭಾವದ ಜಗತ್ತಿನ ಹಾದಿಯಲ್ಲಿ ಶಾಶ್ವತವಾಗಿ ಉಳಿದಿರುವ ಶಕ್ತಿಯೊಂದರ ಮತ್ತು ದೈವಸ್ವರೂಪವಾದ ಆದಿ-ಅಂತ್ಯಗಳಿಲ್ಲದ ಸ್ವರೂಪವೊಂದರ ದಾರಿಯನ್ನು ಚಿತ್ರ ಮನಗಾಣಿಸುತ್ತದೆ.

೭. 'ಸರ್ರಿಯಲಿಸಂ'ನ ಭಾಗವಾದ ಭ್ರಮಾತ್ಮಕ ಬದುಕನ್ನು ನಿರೂಪಿಸುವಲ್ಲಿ ಅನೇಕ ಹೊಸ ಸೃಷ್ಟಿಗಳು ದಾಖಲೆಗಳಾಗಿವೆ 'ಸರ್ರಿಯಲಿಸಂ' ಪಂಥದ ಭಾಗವಾಗಿ ಬೆಳೆದು ಬಂದ ರುದ್ರಗೌಡ ಇಂಡಿಯವರ ಚಿತ್ರದಲ್ಲಿ, ಆಧುನಿಕ ಜಗತ್ತಿನ ಮನುಷ್ಯನ ಜ್ಞಾನದೊಳಗಿನ ಅಜ್ಞಾನವನ್ನು ಬುದ್ಧಿವಂತಿಕೆಯ ಉದ್ಧಟತನವನ್ನು ವಿಡಂಬನಾತ್ಮಕವಾಗಿ ಚಿತ್ರಿಸಿದ್ದಾರೆ. ಜಲವರ್ಣದಿಂದ ರೂಪಗೊಂಡ ಈ ಚಿತ್ರದಲ್ಲಿ ಮನುಷ್ಯ ಬಳಕೆಯಲ್ಲಿನ ಬಾತ್‌ಟಬ್‌ನ್ನು ಕಲ್ಲಂಗಡಿ ಹಣ್ಣಿನಿಂದ ಸೃಷ್ಟಿಸಿದ್ದಾರೆ ಸ್ನಾನದ ನೀರನ್ನು

ಸಹ ಮರು ಬಳಸಿಕೊಳ್ಳಬಹುದಾದ ಸಾಧ್ಯತೆಗಳನ್ನು ಗುರುತಿಸಿದ್ದಾರೆ. ಇಂದು ಎಷ್ಟೇ ಮಳೆಯಾದರೂ ಬೇಸಿಗೆ ಬಂತೆಂದರೆ ಬರವನ್ನು ನಿಯಂತ್ರಿಸಿಕೊಳ್ಳವುದು ಸಾಧ್ಯವಾಗುತ್ತಿಲ್ಲ. ಆದರೆ ಈ ಪ್ರಕೃತಿ ವಿನಾಶವನ್ನು ತಪ್ಪಿಸಬಹುದಾದ ನೀರಿನ ಅಭಾವವನ್ನು ಸಹಿಸಿಕೊಳ್ಳಲು ಸಾಧ್ಯವಾಗಬಹುದು ಎಂಬುದನ್ನು ತಮ್ಮ ಕುಂಚದಿಂದ ಕಲಾವಿದರು ನಿರೂಪಿಸಿದ್ದಾರೆ. ಕೆಸರಲ್ಲಿ ಅರಳುವ ಕಮಲವನ್ನು ಸ್ನಾನದ ನೀರಿನಿಂದ ಬೇಳೆಸಬಹುದು ಎಂದು ತೋರಿಸಿ ನೀರನ್ನು ಹೇಗೆ ಉಪಯೋಗಿಸಬಹುದು ಎಂದು ತಿಳಿಸಿದ್ದಾರೆ. ಚಿಂದಿ ತುಂಬಿದ ನಗರವನ್ನು ರೂಪಕವಾಗಿಟ್ಟು ಮಾಲಿನ್ಯದ ಹೊಸ ಸಂದೇಶವನ್ನು ನೀಡುವಲ್ಲಿ ರುದ್ರಗೌಡ ಇಂಡಿಯವರು ಯಶಸ್ವಿಯಾಗಿದ್ದಾರೆ.

೮. ರುದ್ರಗೌಡ ಇಂಡಿಯವರ ಮತ್ತೊಂದು ಕಲಾಕೃತಿಯು ಅಕ್ರಲಿಕ್ ಮಾಧ್ಯಮವಾಗಿದ್ದು ಓಜೋನ್ ಪದರಿನ ವಿನಾಶದ ಕುರಿತಾದದ್ದು , ವಾಯು ಮಾಲಿನ್ಯದಿಂದ ಆಗುತ್ತಿರುವ ಅನೇಕ ಹಾನಿಗಳಲ್ಲಿ ಅತೀ ಗಂಭೀರವಾಗಿ ಪರಿಗಣಿಸಲ್ಪಡುವುದೆಂದರೆ ಓಜೋನ್ ಪದರದ ವಿನಾಶ ಸೂರ್ಯನಿಂದ ಹೊರಸೂಸುವ ವಿಷಕಾರಿ ಕಿರಣಗಳನ್ನು ಹೀರಿ ನಮಗೆ ಸುರಕ್ಷಿತೆ ಒದಗಿಸುವ ಈ ಪದರಿಗಿಂದು ವಿನಾಶದ ಗಾಳಿ ಬಡಿದಿದೆ, ಅದರ ಆತಂಕದಲ್ಲಿ ಮನುಷ್ಯ ಅದಕ್ಕೆ 'ಪ್ಯಾಚ್' ಅಂಟಿಸುವ ಕೆಲಸ ಮಾಡುತ್ತಿದ್ದಾನೆ ಎಂದು ಅಪಾಯಕಾರಿ ಸತ್ಯವೊಂದನ್ನು ಕಲಾವಿದರು ವಿಡಂಭನಾತ್ಮಕವಾಗಿ ನಿರೂಪಿಸಿದ್ದಾರೆ, ಅದರ ಜೊತೆಗೆ ಪ್ರಕೃತಿಯ ಬಗೆಗೆ ಇರಬೇಕಾದ ಕಾಳಜಿಯನ್ನು ಈ ವಿನಾಶದಿಂದ ಪಾರಾಗಲು ಬಯಸುವ ಸಂದೇಶವನ್ನು ಈ ಚಿತ್ರದ ವಸ್ತುವನ್ನಾಗಿ ಕಲಾವಿದರು ಚಿತ್ರಿಸಿದ್ದಾರೆ. ಇಲ್ಲಿ ಮರವನ್ನು ಕೊಡೆಯಾಕಾರದಲ್ಲಿ ಸೃಷ್ಟಿಸಿ ಅಲ್ಲಿ ಒಂದು ಮೇಜು ಮತ್ತು ಕುರ್ಚಿಗಳನ್ನು ಚಿತ್ರಿಸಿದ್ದಾರೆ ಇದರ ಅರ್ಥ ಇಂದಿನ ಯುವ ಪೀಳಿಗೆ ಧೂಮಪಾನದ ಮತ್ತಲ್ಲಿದ್ದು ಅದರ ಹೋಗೆಯಿಂದ ನಿಸರ್ಗ ಹಾಳಾಗುವದನ್ನು ಆ ಮರದ ಕೊಡೆ ಹರಿದು ಹೊದಹಾಗೆ ಚಿತ್ರಿಸಿದ್ದಾರೆ. ಮರಗಳನ್ನು ಬೆಳೆಸದೇ ಹೋದರೆ ಮುಂದೊಂದು ದಿನ ಆಮ್ಲಜನಕ್ಕಾಗಿ ಪರದಾಡುವ ಭೀಕರ ಪರಿಸ್ಥಿತಿಯನ್ನು ಆಗಬಹುದಾದ ಹಾನಿಯನ್ನು ಚಿತ್ರದಲ್ಲಿ ಭವಿಷ್ಯ ನುಡಿದಿದ್ದಾರೆ. 'ಸರ್‍ರಿಯಲಿಸಂ' ಪಂಥದ ಮಾರ್ಗವಾಗಿ ವಿಡಂಬನೆ ಇವರ ಕಲಾಕೃತಿಗಳ ಮುಖ್ಯ ವಸ್ತು ಆಶಯವಾಗಿ ಕಾಣುತ್ತದೆ. ಇದರ ವರ್ಣ ಸಂಯೋಜನೆ ತುಂಬಾ ಅರ್ಥಪೂರ್ಣವಾಗಿ ಮೂಡಿಬಂದಿದೆ ಎಂದು ಹೇಳಬಹುದು.

### ೨. ರಾಜಕೀಯ ಚಿತ್ರಗಳು

ಕಲಾವಿದರು ಹೆಚ್ಚಾಗಿ ರಾಜಕೀಯ ಚಿಂತನೆಗಳಿಗೆ ಬೆಲೆ ಕೊಟ್ಟಿರುವುದು ವಿರಳವಾಗಿ ಕಂಡುಬರುತ್ತದೆ. ಇಂದಿನ ರಾಜಕೀಯ ಚಟುವಟಿಕೆಗಳನ್ನು ಗಮನಿಸಿದಾಗ ಅವುಗಳ ಬಗ್ಗೆ ಯಾವ ಕಲಾವಿದರೂ ಯೋಚಿಸಲು ಸಹ ಮನಸ್ಸು ಮಾಡುವುದಿಲ್ಲ. ಆದರೂ ಎಲ್ಲೋ ಬೆರಳೆಣಿಕೆಯಷ್ಟು ಕಲಾವಿದರು ಈ ಅಂಶಗಳ ಬಗ್ಗೆ ಚಿತ್ರಗಳನ್ನು ರಚಿಸಿದ್ದು ಕಂಡುಬರುತ್ತದೆ. ರಾಜಕೀಯ ಯಾವ ರೀತಿಯಲ್ಲಿ ಕಲಾವಿದನಿಗೆ ಕಲಾಕೃತಿ ರಚಿಸಲು ಉತ್ತೇಜಿಸುತ್ತದೆ ಎಂದು ಒಂದು ಸಣ್ಣ ಉದಾಹರಣೆ

ನೋಡಬಹುದು. ಪ್ಯಾಬ್ಲೋ ಐಕಾಸೋನ 'ಗೇರ್ನಿಕಾ' ಕಲಾಕೃತಿ ನೋಡಬಹುದು. ಇಲ್ಲಿ ಪಿಕಾಸೋ ಯಾವಾಗಲು ತನ್ನ ಸ್ವಂತ ಅಭಿವ್ಯಕ್ತಿಗೆ ಪ್ರಾಮುಖ್ಯತೆ ಕೊಡುತ್ತಿದ್ದ. ಆದರೆ ರಾಜಕೀಯದಲ್ಲಿ ನಡೆಯುವ ಘಟನೆಗಳನ್ನು ನೋಡಿ ನೋಡಿ ಅವನ ಮೇಲಾದ ಪ್ರಭಾವ 'ಗೇರ್ನಿಕಾ' ಕಲಾಕೃತಿಯ ಮೂಲಕ ಹೊರಹೊಮ್ಮಿತು ಎಂದು ಹೇಳಬಹುದು. ಇಲ್ಲಿ ಕಲಾವಿದರು ಯಾವಾಗ ಯಾವುದರಿಂದ ಪ್ರಭಾವಿತರಾಗುತ್ತಾರೆ ಎಂದು ಹೇಳಲು ಸಾಧ್ಯವಿಲ್ಲ. ಹೀಗೆ ಇಲ್ಲಿ ಕರ್ನಾಟಕದ ಕಲಾವಿದರಲ್ಲಿಯೂ ಸಹ ರಾಜಕೀಯ ವಿಷಯಕ್ಕೆ ಸಂಬಂಧಿಸಿದ ಚಿತ್ರಗಳಲ್ಲೂ ಹೆಚ್ಚಾಗಿ ಕಾಣುವುದಿಲ್ಲವಾದರೂ ಸರ್‍ರಿಯಲಿಸಂ ಶೈಲಿಯಲ್ಲಿ ಕಲಾಕೃತಿ ರಚಿಸುತ್ತಿರುವ ಕಲಾವಿದರುಗಳಲ್ಲಿ ಸುನಿಲ್ ಮಮದಾಪುರ ಅವರು ಕೇವಲ ರಾಜಕೀಯ ಕಲಾಕೃತಿ ನೋಡಬಹುದಾಗಿದೆ. ಮತ್ತು ನಿಂಗರಾಜ ಪಾಟೀಲ್ ಕಲಾಕೃತಿಗಳಲ್ಲೂ ಸಹ ರಾಜಕೀಯ ಕಲಾಕೃತಿಗಳನ್ನು ಕಾಣಬಹುದು. ಇಲ್ಲಿ ಇವರಿಬ್ಬರದು ಒಂದೊಂದು ಕಲಾಕೃತಿಗಳನ್ನು ಮಾತ್ರ ಅಧ್ಯಯನಕ್ಕೆ ಒಳಪಡಿಸಲಾಗಿದೆ

೧. ಸರ್‍ರಿಯಾಲಿಸಂನ ಅಂಶವನ್ನು ಹೊಂದಿದ ಈ ಚಿತ್ರ ಸುನೀಲ್ ಮಮದಾಪುರ ಅವರು ಅಕ್ರಾಲಿಕ್ ಮಾಧ್ಯಮದ್ದಾಗಿದ್ದು ಕಲಾಕೃತಿಯಲ್ಲಿ ಸೃಜನ ಶೀಲತೆಯನ್ನು ಎತ್ತಿ ತೋರಿಸುತ್ತದೆ. ಅವರ ಕಲ್ಪನೆಯನ್ನು ಅತ್ಯಂತ ಅರ್ಥ ಪೂರ್ಣವಾಗಿ ಈ ಚಿತ್ರದಲ್ಲಿ ಬಿಂಬಿಸಿದ್ದಾರೆ. ಅವರ ಚಿಂತನೆಯಲ್ಲಿ ಸ್ವಾತಂತ್ರ್ಯ ಹೋರಾಟಗಾರರು ಯಾವ ರೀತಿ ಸ್ವಾತಂತ್ರ್ಯ ದೊರಕಿಸಿದರು ಅಲ್ಲಿ ನಡೆದಿರುವ ವಿವಿಧ ಹೋರಾಟಗಳನ್ನು ಅವರ ಚಿಂತನೆಯ ಮೂಲಕ ತೋರಿಸಿದ್ದಾರೆ ಹಾಗೂ ರಾಜಕೀಯವಾಗಿ ಯಾವ ರೀತಿ ಸಮಯ ಬದಲಾವಣೆ ಆಗುತ್ತದೆ ಸಮಯಕ್ಕೆ ಸರಿಯಾಗಿ ನಡೆಯುವ ವಿವಿಧ ಯೋಜನೆಗಳನ್ನು ಈ ಚಿತ್ರದಲ್ಲಿ ಚಿತ್ರಿಸಿದ್ದಾರೆ ಮತ್ತು ರಾಜಕೀಯ ಕುರ್ಚಿಗಾಗಿ ನಡೆಯುವ ಇಂದಿನ ವಿವಿಧ ರೀತಿಯ ಕಲಾಪಗಳನ್ನು ಸಹ ಕಲ್ಪಿಸಿದ್ದಾರೆ, ತದ ನಂತರದಲ್ಲಿ ರಾಜಕೀಯದಲ್ಲಿ ನಡೆಯುವ ವಿವಿಧ ಧೋರಣೆಗಳನ್ನು ಈ ಚಿತ್ರದಲ್ಲಿ ಬಿಂಬಿಸಿದ್ದಾರೆ. ಒಟ್ಟಾರೆಯಾಗಿ ಸ್ವಾತಂತ್ರ ಎಂಬುದು ಹಲವಾರು ಹೋರಾಟಗಾರರು ಸೇರಿ ದೊರಕಿಸಿ ಕೊಟ್ಟದ್ದಾಗಿದೆ ಸ್ವಾತಂತ್ರ್ಯವನ್ನು ಯಾವ ರೀತಿಯಾಗಿ ನಾವು ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಬಳಸಿಕೊಳ್ಳುತ್ತಿದ್ದೇವೆ ಎಂಬುದನ್ನು ಈ ಚಿತ್ರದಲ್ಲಿ ಕಲ್ಪನೆಯ ಮೂಲಕ ಚಿತ್ರಿಸಿದ್ದಾರೆ.

೨. ನಿಂಗರಾಜ ಪಾಟೀಲರ ಈ ಚಿತ್ರ ಸರ್‍ರಿಯಲಿಸಂನ ಅಂಶಗಳನ್ನು ಒಳಗೊಳ್ಳುತ್ತಲೇ ಹೊಸ ವಿಡಂಬನೆಯೊದನ್ನು ನಿರೂಪಿಸುತ್ತದೆ. ಚದುರಂಗದಾಟದಂತಿರುವ ಇಂದಿನ ಬದುಕು ಎಲ್ಲಿಯವರೆಗೆ ಆವರಿಸಿದೆ? ಎಂಬುದನ್ನು ಕಲಾವಿದರು ರೂಪಕದ ಮೂಲಕ ಹೊಸದಾದ ಅನುರಣನವೊಂದನ್ನು ಸೃಷ್ಟಿಸುತ್ತದೆ. ಚದುರಂದಾಟದ ಬದುಕು ಯಾವ ವಿಚಾರಗಳಿಗೆ ತಾಕಲಾಟಗಳನ್ನು ಸೃಷ್ಟಿಸಲುಸಾಧ್ಯಾ ಎಂಬ ಪ್ರಶ್ನೆಯನ್ನು ಕಲಾವಿದ ಸಹೃದಯನಲ್ಲಿ ಹುಟ್ಟು ಹಾಕಿದ್ದಾರೆ. ಶೌಚಾಲಯದ ಭಾಗವಾದ ಸರ್ಕಾರದ ಯೋಜನೆಗಳನ್ನು ಈ ಚಿತ್ರ ವಿಡಂಬಿಸುತ್ತಿದೆಯೇ ಎಂಬುದನ್ನು ಗುರುತಿಸಲು ಸಾಧ್ಯವಾಗಬಹುದೆ? ಚದುರಂಗದಾಟದ ರೂಪಕಗಳು ರೂಪಿಸಿರುವ ಅಲೆಗಳು ಸಹೃದಯನಿಗೆ

ವಿಶೇಷವೆನಿಸಲು ಕಾರಣವೇ ಅವನ ಜೀವನ ಒಂದು ಚದುರಂಗದಾಟದಂತಿದೆ ಎಂಬುದರಿಂದ ಬದುಕಿನ ರಾಜಕಾರಣವೊಂದರ ಏಳುಬೀಳುಗಳನ್ನು ಈ ಚಿತ್ರ ಸ್ಮರಿಸುತ್ತದೆ. ಉದಯೋನ್ಮವಾದ ಕಲಾವಿದರಲ್ಲಿ ಇಂದು ಸರಿಯಲಿಸಂ'ನ ಅಂಶಗಳ ವ್ಯಾಪಕತೆಯನ್ನು ಸಾಧ್ಯವಾಗಿಸಿದೆ ಅಕ್ರಾಲಿಕ್ ಮಾಧ್ಯಮದಲ್ಲಿ ರಚಿಸಿದ ಈ ಕಲಾಕೃತಿಯಲ್ಲಿ ಬಣ್ಣಗಳ ಸಂಯೋಜನೆ ಮಾರ್ಮಿಕವಾಗಿದೆ ಎಂದು ಹೇಳಬಹುದು. ಈ ಕಲಾವಿದರು ಬಹುರೂಪಿಯ ವತ್ತುವುಳ್ಳ ಸೃಜನಶೀಲತೆಯನ್ನು ಸೃಷ್ಟಿಸಿವಲ್ಲಿ ವಿಶಿಷ್ಟವಾಗಿದ್ದಾರೆ.

### ೩. ನೈಸರ್ಗಿಕ ಚಿತ್ರಗಳು

ಜಗತ್ತು ಸೌಂದರ್ಯಮಯ ಪ್ರಕೃತಿಯಲ್ಲಿ ಕಾಣದ ಬಣ್ಣವಿಲ್ಲ, ನೋಡಲಾಗದ ಆಕೃತಿಯಿಲ್ಲ. ಸೃಷ್ಟಿಯೊಡಮಾಡಿ ಬಂದ ನಾದದ ವೈವಿಧ್ಯತೆ ಅನಂತ. ಮಾನವನ ಮನೊರಾಜ್ಯದ ಬೆಳವಣಿಗೆಗೆ ಪ್ರಕೃತಿಯಿಂದಲೆ! ಪ್ರಕೃತಿ ನಿಯಮ ಬೆಳಕು-ಕತ್ತಲೆ, ಸುಖ-ದಃಖ, ಸುರುಪು-ಕುರುಪು, ಹೀಗೆ ದ್ವಂದ್ವಮಯ ಆದರೂ ನಮಗೆ ಎಲ್ಲೆಲ್ಲಿಯೂ ಕಂಡುಬರುವುದು. ಸೃಷ್ಟಿಯ ಸೌಂದರ್ಯವಾಗಿ ಮಾನವನಿಗೆ ಸೌಂದರ್ಯಾಭಿರುಚಿ ನಿಸರ್ಗದತ್ತ ಗುಣ ಆದುದರಿಂದಲೆ ಅವನು ಸುಂದರ ದೃಶ್ಯಗಳನ್ನು ನೊಡಲು ಸುಶ್ರಾವ್ಯ ನಾಧವನ್ನಾಲಿಸಲೂ ಆಶಿಸುವನು(

ನಿಸರ್ಗದ ಒಂದೇ ಸನ್ನಿವೇಶದಲ್ಲಿ ಒಂದೇ ಬಗೆಯ ವಿಷಯ ಸಂಗ್ರಹಣೆಗೈದರು, ಎಲ್ಲರ ಅಭಿರುಚಿಯು ಒಂದೇ ಬಗೆಯಲ್ಲಿರುವುದು ಅಸಂಭವ, ಅವರವರ ಮನೋಧರ್ಮಕ್ಕನುಗುಣವಾಗಿ ಈ ಅಭಿರುಚಿ ಒಬ್ಬೊಬ್ಬರಲ್ಲಿ ಒಂದೂಂದು ಬಗೆಯಲ್ಲಿ ವಿಶೇಷರೀತಿಯಲ್ಲಿ ವ್ಯಕ್ತವಾಗುವುದು. ಕೇಲವರಿಗೆ ಮನವಲಿದ ದೃಶ್ಯಗಳನ್ನು ಕೃತಿರೂಪಕ್ಕೆ ತರುವ ಹಂಬಲ; ಓರ್ವ ಕವಿತಾ ರಚನೆಯಲ್ಲಿ ಮನ ಮಾಡಿದರೆ, ಮತ್ತೋರ್ವ ಚಿತ್ರರಚನೆಯಲ್ಲಿ ಅಥವಾ ಮೂರ್ತಿನಿರ್ಮಾಣದಲ್ಲಿ ಅವರ ಆಸಕ್ತಿ ತೋರುವರು. ಅಂತಹ ಪ್ರತಿಭಾವಂತರು ಸಹಜತೆಯ ಎಲ್ಲೆಮೀರಿ, ಕಲ್ಪನಾಸಾಮರ್ಥ್ಯದಿಂದ ರೂಪುಗೊಂಡ ಭಾವನಾ ಪ್ರಪಂಚದಲ್ಲಿ ಓಲಾಡುವ. ಆನಂದದಲ್ಲಿ ಭಾಸವಾಗುವ ಭವ್ಯ ರೂಪವನ್ನು ತಮ್ಮ ಕೃತಿಯಲ್ಲಿ ರೂಪಿಸುವರು. ಎಲ್ಲರಿಂದ ಈ ಬಗೆಯ ಅಸದೃಶ್ಯ ಕೃತಿ ನಿರ್ಮಾಣ ಸಾಧ್ಯವಾಗದಿರಬಹುದು. ಆದರೆ ಅವರವರ ಅನುಭವಕ್ಕೆ ತಕ್ಕಂತೆ ಬುದ್ಧಿ ಸಾಮರ್ಥ್ಯಕ್ಕೆ ತಕ್ಕಂತೆ, ಅಭಿರುಚಿಗನುಗುಣವಾಗಿ ತಮಗೆ ತೋರಿದ ಭಾವನೆಗೆ ಕೃತಿಯನ್ನು ಕೊಡುತ್ತಾರೆ. ಅಂತಹ ಕಲಾವಿದರ ಕಲಾಕೃತಿಗಳನ್ನು ನಾವು ಇಲ್ಲಿ ನೋಡಬಹುದು. ಇಲ್ಲಿ ನಿಸರ್ಗವನ್ನು ತಮ್ಮದೆ ಆದ ದೃಷ್ಟಿಯಿಂದ ನೋಡಿ ತಮ್ಮ ಕಲ್ಪನಾ ವಿಲಾಸಕ್ಕೆ ಹೊಸ ಜಗತ್ತೆ ತೆರೆದಿಡುವ ಹಾಗೆ ಕಲಾವಿದರು ಕಲಾಕೃತಿಗಳನ್ನು ರಚಿಸಿದ್ದಾರೆ ಅವರಲ್ಲಿ ಸಿ. ಚಂದ್ರಶೇಖರ, ಈಶ್ವರ್ ಪ್ರಸಾದ್, ಚಂದ್ರಹಾಸ್ ಜಾಲಿಹಾಳ, ನಂದಬಸಪ್ಪಾ ವಾಡೆ ಮೊದಲಿಗರಾಗಿದ್ದಾರೆ. ಅವರ ಕಲಾಕೃತಿಗಳನ್ನು ಈ ಕೇಳಗೆ ನೋಡಬಹುದಾಗಿದೆ.

೧. ಸಿ. ಚಂದ್ರಶೇಖರ ಅವರು ೧೯೮೮ರ ಅವಧಿಯಲ್ಲಿ ಆ್ಯಪಲ್ ಸರಣಿ ಚಿತ್ರಗಳು ರಚಿಸಿದರು. ಅವುಗಳಲ್ಲಿ ನಾವು ಸರ್‍ರಿಯಲಿಸಂ ಪಂಥದದ ಅಂಶಗಳನ್ನು ಕಾಣಬಹುದು. ಈ ಅಧ್ಯಯನದಲ್ಲಿ ಆ ಸರಣೀಯ ಒಂದು ಚಿತ್ರವನ್ನು ಮಾತ್ರ ಆಯ್ಕೆ ಮಾಡಿಕೊಂಡಿದ್ದೇನೆ. ಈ ಕಲಾಕೃತಿಯು ತೈಲಮಾಧ್ಯಮವಾಗಿದ್ದು ಕ್ಯಾನ್ವಾಸ್ ಮೇಲೆ ಚಿತ್ರಿಸಿದ್ದಾರೆ. ಈ ಕಲಾಕೃತಿಯಲ್ಲಿ ಪ್ರಕೃತಿಯನ್ನು ಹೆಣ್ಣಿಗೆ ಹೋಲಿಸಿರುವುದು ಸೂಕ್ಷ್ಮವಾಗಿ ಮನಸ್ಸಿಗೆ ಭಾಸವಾಗುತ್ತದೆ. ದಟ್ಟ ಮತ್ತು ತಿಳಿವರ್ಣಗಳನ್ನು ಬಳಸಿದ್ದು, ಸ್ಥಳಾವಕಾಶಕ್ಕೆ ಹೊಂದಿಕೊಳ್ಳುವಂತೆ ಸಂಯೋಜಿಸಿದ್ದಾರೆ. ನೀಲಿ ಮತ್ತು ಕೆಂಪು ವರ್ಣದ ಸ್ತ್ರೀಯಾಕೃತಿಗಳು ಎಡ ಮತ್ತು ಬಲ ಪಾರ್ಶ್ವ ಆಕೃತಿಯಲಿದ್ದು, ಮೇಲ್ಬದಿಯ ಸ್ಥಳಾವಕಾಶದ ಆಕಾಶದಲ್ಲಿ ತೇಲಾಡುವ ಸ್ಥಿತಿಯಲ್ಲಿ ಕತ್ತರಿಸಿದ ಸೇಬು ಹಣ್ಣಿನಾಕೃತಿಯನ್ನು ಸಂಯೋಜಿಸಲಾಗಿದೆ. ಇಲ್ಲಿ ಕಲಾವಿದರು ಮನಸ್ಸಿನ ಭಾವನೆಗಳನ್ನು ವ್ಯಕ್ತಪಡಿಸಿದ್ದ ರೀತಿಯನ್ನು ನೋಡಿದರೆ ಆ ಕಲಾಕೃತಿಯಲ್ಲಿ ಯಾವುದೋ ನಿಗೂಡತೆ ಮತ್ತು ಕಳವಳ ಕಾಣಿಸುತ್ತದೆ.

೨. ಮೊಟ್ಟೆಯ ಸರಣೀಯ ಚಿತ್ರಗಳು ನೋಡಿದಾಗ ಸಾಲ್ವರ್ ಡಾಲಿಯ ನೆನಪಾಗುತ್ತದೆ. ಇಲ್ಲಿ ಸಿ.ಚಂದ್ರಶೇಖರ ಅವರು ತಮ್ಮದೇ ಆದ ಶೈಲಿಯಲ್ಲಿ ರೂಪಿಸಿದ್ದಾರೆ. ತೈಲವರ್ಣದ ಈ ಕಲಾಕೃತಿಯಲ್ಲಿ ಕಲ್ಲಿನ ಗೋಡೆಯನ್ನು ಸೃಷ್ಟಿಸಿ, ಅದರ ನಡುವೆ ಮೊಟ್ಟೆಯೊಂದನ್ನು ಸಿಲುಕಿದ ರೀತಿಯಲ್ಲಿ ಅದು ಒಡೆದು ಅದಕ್ಕೆ ಬಟ್ಟೆಯ ಪ್ಯಾಚ್‌ಗಳನ್ನು ಹಾಕಿ, ಆಕಾಶಕ್ಕೆ ಯಾವುದೋ ಒಂದು ಆಕಾರ ಬಟ್ಟೆಯ ರೀತಿಯಲ್ಲಿ ಚಾಚಿದ ಅದನ್ನು ದಾರದಿಂದ ಹೊಲೆದ ರೀತಿಯಲ್ಲಿ ಇದೆ. ಅದರಲ್ಲಿ ಬಣ್ಣಗಳ ಬಳಕೆಯ ರೀತಿಯನ್ನು ನೋಡಿದರೆ ಕಲಾವಿದರ ಮನಸ್ಸಿನ ಯಾವುದೋ ಒಂದು ಹರಿದ ಭಾವನೆಗಳನ್ನು ಹೊಲಿದ ರೀತಿಯಲ್ಲಿ ಕಾಣುತ್ತದೆ.

೩. ಈ ಕಲಾಕೃತಿ ಈಶ್ವರ್ ಪ್ರಸಾದ್ ಅವರ ಅಕ್ರಾಲಿಕ್ ಮಾಧ್ಯಮದ್ದಾಗಿದ್ದು ಇಲ್ಲಿ ನಿರ್ಭಿತವಾದ ಲೋಕದೊಳಗೆ ಸತ್ಯ–ಮಿಥ್ಯಗಳ ಎರಡು ಭವಬಂಧನಗಳಿಗೆ ಸಿಕ್ಕು ಮಾನವನ ಶರೀರ ಆವಿಯಾಗುವರೆಗೂ ಎಲ್ಲವನ್ನು ಮೈಗೂಡಿಸಿಕೊಂಡು ಬದುಕನ್ನು ನಡೆಸುತ್ತಾನೆ ಎಂದು ಈ ಚಿತ್ರದಲ್ಲಿ ಕಲಾವಿದರು ಕಟ್ಟಿಕೊಟ್ಟಿದ್ದಾರೆ ಎರೆಡೂ ದೀರ್ಘ ಸಮಾಧಿಯಾಕಾರದ ಕಲ್ಲುಗಳ ಮೇಲೆ ಎತ್ತರದ ಗುಪ್ಪೆಯ ಮನೆಯನ್ನು ಮತ್ತು ಕೆಂಪು ಕಡಲಿನ ಮುರುಕು ಚಂದಿರ ಮತ್ತು ಕಗ್ಗತ್ತಲಬಂಡೆಯನ್ನು ಕಲಾವಿದ ಚಿತ್ರಿಸಿ ಒಂದು ಅಗಮ್ಯ ಲೋಕಕ್ಕೆ ಕೊಂಡ್ಯೊಯುವ ನಾಕವನ್ನು ನಿರ್ಮಿಸಿದ್ದಾರೆ. ಒಂದು ಅಖಂಡ ಪಾತ್ರೆಯಲ್ಲಿ ಹಾಲಿನ ಮೇಲೆ ವಿಲ್ಯದೆಲೆಯನ್ನು ಚಿತ್ರಿಸಿ ಆ ಮೂಲಕ ತಿಳಿ–ಶುಭ್ರಹಾಲಿನ ಸಂಕೇತದೊಂದ ಶುಭಕಾರ್ಯದ ಸಂಕೇತ ವಿಲ್ಯದ ಎಲೆಯನ್ನು ಚಿತ್ರಿಸಿ ಶುಭ ಸಂಕೇತಕ್ಕೆ ನಾಂದಿಹಾಡಿದ್ದಾರೆ.

೪. 'ಚಂದ್ರಹಾಸ ಜಾಲಿಹಾಳ'ರ ಈ ಚಿತ್ರ "ಸರ್‍ರಿಯಲಿಸಂ ಪಂಥ"ದ ಮುಂದುವರಿಕೆಯ ಭಾಗವಾಗಿದೆ ಇದು ಅಕ್ರ್ಯಾಲಿಕ್ ಮಾಧ್ಯಮದ್ದಾಗಿದ್ದು ರೂಪುಗೊಂಡ ಸರ್‍ರಿಯಲಿಸಂ ಹೊಸ ರೂಪ ಪಡೆದದ್ದು 'ಮನುಷ್ಯನ ಸುಪ್ತವಾದ ಮನಸ್ಸಿನ ಕನಸಿನ ಆವರಣವನ್ನು ಸೃಜನಶೀಲ ನೆಲೆಯಲ್ಲಿ ನಿರೂಪಿಸುವ

ಮೂಲಕ'. ಮೂರ್ತತೆಯಿಂದ ಅಮೂರ್ತದೆಡೆಗೆ ಸಾಗುವ ಆಶಯವನ್ನು ಕಲೆಯ ಮೂಲಕ ಈ ಚಿತ್ರ ಕಲಾವಿದರು ಹೇಳಹೊರಟ್ಟಿದ್ದಾರೆ. ಮನುಷ್ಯನ ಬಾವುಕ ಜಗತ್ತಿನಲ್ಲಿ ತೆರೆದುಕೊಳ್ಳುವ ಬಯಲೊಂದನ್ನು ತನ್ನ ಇರುವಿಕೆಯಿಂದಲೇ ಹುಡುಕುವ ಮನಸ್ಸಿನ ಆಶಯವನ್ನು ಈ ಚಿತ್ರ ಬಿಚ್ಚಿಡುತ್ತದೆ. ಕಣ್ಣಿಗೆ ತಟ್ಟನೆ ರಾಚುವ ಆಕಾಶದ ತಿಳಿ ನೀಲಿಯೊಂದಿಗೆ ಗೋಡೆಯ ಪರದೆಯಾಗಿ ರೂಪವಾಗಿದ್ದು ಆಕಾಶವೇ ಅಂತಿಮವೆಂಬ ತತ್ವವೊಂದನ್ನು ಮೀರಿ ಕಲಾವಿದ ಅದರಾಚೆಗಿನ ಮಂದ ಹಳದಿಯ ಛಾಯೆಯಾಗಿ ಸಹೃದಯನನ್ನು ಹಿಡಿದಿಡುವಲ್ಲಿ ಯಶಸ್ವಿಯಾಗಿದ್ದಾರೆ. ರೆಂಬೆ ಕೊಂಬೆಗಳಾಗಿ ಕವಲೊಡೆದ ಮರ ಸದಾ ಚಲನಶೀಲತೆಯ ಮತ್ತು ಅಸ್ತಿತ್ವದ ಜೀವಂತಿಕೆಯನ್ನು ತೋರುತ್ತದೆ. ಪ್ರೇಕ್ಷಕನ ಆವರಣದಿಂದಲೇ ಈ ಅಂತರಂಗದ ಜಗತ್ತಿಗೆ ಪ್ರವೇಶ ಪಡೆಯಲು, ಬಂಧನದಿಂದ ಬಯಲಾಗಲು ಕಲಾವಿದರು ಈ ಚಿತ್ರದ ಮೂಲಕ ಕದವಿಲ್ಲದ ಬಾಗಿಲಾಗಿದ್ದಾರೆ.

೫. ಚಿತ್ರದಲ್ಲಿ ಕಲಾವಿದ ಚಂದ್ರಹಾಸ ಜಾಲಿಹಾಳ ಅವರು 'ಸರ್‍ರಿಯಲಿಸಂ' ನ ರೂಪಕದ ಸ್ವರೂಪವನ್ನು ವ್ಯವಸ್ಥಿತವಾಗಿ ಬಳಸಿಕೊಂಡಿದ್ದಾರೆ ಕತ್ತಲೆಯ ತಿಳಿನೀಲಿಯ ಮಂದತೆಯನ್ನು ಮಿನುಗು ನಕ್ಷತ್ರಗಳು ಸೃಷ್ಟಿಸಿರುವ ಆವರಣ ಚಿತ್ರಕ್ಕೊಂದು ನವಿರಾದ ಅರ್ಥವನ್ನು ಸ್ಫುರಿಸುವಂತೆ ಮಾಡಿದ್ದಾರೆ. ಕನಸಾಗಿ ಜನ್ಮತಾಳುವ ಆವರಣದಲ್ಲಿ ಜಗತ್ತಿನ ಮೂಲ ಸ್ಥಿತಿ ಬಿಡಿಬಿಡಿಯಾಗಿರದೆ ಒಂದೇ ಕಮಾನಿನ ರೂಪವಾಗಿರುತ್ತದೆ. ಜನವಸತಿಗಳ, ಜೀವ ಸೆಲೆಯ ಅಸ್ಥಿತ್ವದ ಚಲನಶೀಲತೆ ತುಂಡು-ತುಂಡು ಗೋಚರಿಸುವಂತೆ ಮನುಷ್ಯನ ಅನುಭವ ಲೋಕದ ಸಂಗ್ರಹವನ್ನು ಹಿಡಿದಿಡುವಲ್ಲಿ ಈ ಕಲಾವಿದರು ವಿಶೇಷ ಪ್ರತಿಭೆಯುಳ್ಳವರು. ಅಕ್ರಾಲಿಕ್ ಮಾಧ್ಯಮದ ಈ ಚಿತ್ರ ಹೇಳ ಹೊರಟಿರುವ ಭಾವ ಜಗತ್ತು ಬಯಲೊಳಗಿನ ಸೆರೆಯನ್ನು ಕನ್ನಡದಲ್ಲಿ ಕನಕದಾಸರು 'ನೀ ಮಾಯೇಯೊಳಗೋ ನಿನ್ನೊಳು ಮಾಯೆಯೋ' ಎಂಬ ಕೀರ್ತನೆಯಲ್ಲಿ "ಬಯಲು ಆಲದೊಳಗೊ ಆಲಯದೊಳು ಬಯಲೋ" ಎಂಬ 'ಮೆಟಾಫರ್'ವೊಂದನ್ನು ಸೃಷ್ಟಿಸುತ್ತಾರೆ. ಮನುಷ್ಯನಿಗೆ ಇದೆಲ್ಲವೂ ಹೊಳೆಯುವುದು ಅವನ ಈ ನಿರಂತರ ಸೆಣಸಾಡುವ ಗೊಂದಲಮಯ ಬದುಕಿನಿಂದ ದೂರವಾಗಬೇಕೆಂಬ ಬಯಕೆ ಬಂದಾಗ, ತನ್ನ ಬಗ್ಗೆಯೇ ತಾನು ಕಂಡುಕೊಳ್ಳಬಹುದುದಾದ ಉತ್ತರದ ಹುಡುಕಾಟ ಆರಂಭವಾದಾಗ ಈ ಚಿತ್ರ ಕ್ಷಣಹೊತ್ತು ಮನುಷ್ಯನ ಈ ಆವರಣವನ್ನು ಅನಾವರಣ ಮಾಡುವಲ್ಲಿ ಯಶಸ್ವಿಯಾಗಿದೆ.

೬. ಈ ಚಿತ್ರದಲ್ಲಿ ನಂದಬಸಪ್ಪ ವಾಡೆಯವರು ಅಕ್ರಾಲಿಕ್ ಮಾಧ್ಯಮದಿಂದ ಚಿತ್ರಸಿದ್ದಾರೆ ಇಡಿ ಭೂಮಿಯನ್ನು ಎತ್ತಿಕೊಂಡು ಬಸವಣ್ಣ ನವರ ಅನುಗ್ರಹಕ್ಕೆ ವೈಯುವ ಹಾಗೆ, ದೇವರಿಗೆ ಒಂದು ಇಂಪಾದ ನಾದ ಕೇಳಿಸುವ ಹಾಗೂ ಹೂವನ್ನು ದೇವರಿಗೆ ಏರಿಸುವ ರೀತಿಯಲ್ಲಿ ಪಕ್ಷಿಯೊಂದು ಇಡಿ ಭೂ ಮಂಡಲವನ್ನು ಸುತ್ತು ಹಾಕುವ ಹಾಗೆ ದೃಶ್ಯ ಕಲಾವಿದರ ಕಲ್ಪನೆ ಆಗಿದೆ. ಆದರೆ ಮನುಷ್ಯ ಅಷ್ಟೆ ಅಲ್ಲದೆ ಪಕ್ಷಿ, ಪ್ರಾಣಿ, ಗಿಡ, ಮರ, ಭೂಮಿ, ನೀರು, ಗಾಳಿ, ಬೆಂಕಿ ಎಲ್ಲದಕ್ಕು ಒಂದು ಶಕ್ತಿಯನ್ನು ದೇವರು ಕೋಟ್ಟಿದ್ದಾನೆ. ಸೃಷ್ಟಿಯಲ್ಲಿ ಎಲ್ಲವು ಸುಂದರ ಎನ್ನುವ ಹಾಗೆ ಈ ಚಿತ್ರವನ್ನು ನೋಡಿದರೆ ಕಲಾವಿದರ ವಿಭಿನ್ನ ರೀತಿಯ ಕಲಾಕೃತಿಯಾಗಿದೆ.

೭. ಆಕಾರಕ್ಕು ಮತ್ತು ಚಿತ್ರಕ್ಕು ಒಂದು ಬೆಸುಗೆಯನ್ನು ಬೆಸೆಯುವ ಈ ಕಲಾಕೃತಿಯನ್ನು ಶ್ರೀ ಈಶ್ವರ ಪ್ರಸಾದ್ ಅವರು ಅಚ್ಚು-ಕಟ್ಟಾಗಿ ಚಿತ್ರಿಸಿದ್ದಾರೆ. ಈ ಕಲಾಕೃತಿ ಅಕ್ರಾಲಿಕ್ ಮಾಧ್ಯಮದ್ದಾಗಿದ್ದು ಚಿತ್ರದಲ್ಲಿ ಕಾಣುವ ಹಾಗೆ ಆಕಾಶಕ್ಕೆ ಅಣಿಯಾಗಿ ಮೂಡುವ ಚಂದಿರನನ್ನೆ ದಿಟ್ಟಿಸಿನೋಡುವ ನೀಲಿ ಗಗನವನ್ನು ಚುಂಬಿಸಿ ಹಾರುವ ವಿಮಾನವನ್ನು ಕಪ್ಪು ವರ್ಣದಿಂದ ಸುಂದರವಾಗಿ ಚಿತ್ರಿಸಲಾಗಿದೆ. ಜಗದ ಸರ್ವ ಚರಾಚರಗಳನ್ನು ಒಳಗೊಂಡು ಬೂಮಿ-ಆಕಾಶಗಳ ವರ್ಗಿಕರಣ ಮಧ್ಯ ಕೊಡೆಯಾಕಾರದ ಚಿತ್ರ ಮತ್ತು ಪಿರಾಮಿಡ್ ಆಕಾರವು ಚಿನ್ನದಂತೆ ಹೊಳೆಯುವ ಹಾಗೆ ಚಿತ್ರಿಸಿ ಅಲಲ್ಲಿ ನಡುನೀಲಿ ಮತ್ತು ಹಚ್ಚ ಹಸಿರಿನ ವೈವಿದ್ಯತೆಯುಳ್ಳ ತರೆವಾರಿ ಬಣ್ಣಗಳನ್ನು ಬಳಸಿದ್ದು ಮರದ ಖಾಂಡಕ್ಕೆ ಬಿಳಿ ಬಣ್ಣವನ್ನು ಬಳಸಿದ್ದಾರೆ ಹಾಗೂ ಬಟ್ಟೆಯನ್ನಿಟ್ಟ ಕಪ್ಪು-ಬಿಳಿಪಿನ ಸಾಂಧ್ರತೆಯನ್ನು ಕಲಾವಿದರ ಸದೂದ್ದೇಶವಾಗಿ ಬಳಸಿದ್ದಾರೆ. ಒಟ್ಟಿನಲ್ಲಿ ಚಿತ್ರ ವಿಕ್ಷಕರ ಸ್ಮøತಿ ಪಲ್ಲಟದಲ್ಲಿ ಒಂದು ಅಚ್ಚಳಿಯದೆ ಮೋಹರೆಯನ್ನು ಕಲಾವಿದರು ಮೂಡಿಸುವಲ್ಲಿ ಯಶಸ್ವಿಯಾಗಿದ್ದಾರೆ.

೮. ಕಲಾವಿದರಾದ ಈಶ್ವರ ಪ್ರಸಾದ್ ಅವರು ಈ ಚಿತ್ರದಲ್ಲಿ ಹೇಳಲಾಗದ ಮತ್ತು ಮಾತಿಗೂ, ವ್ಯಾಖ್ಯೆನಕ್ಕೊನಿಲುಕದ ಒಂದು ಅಮೂರ್ತ ಚಿತ್ರವನ್ನು ಕಟ್ಟಿಕೊಟ್ಟಿದ್ದಾರೆ. ಆಸೆಗಳ ಚಿಗುರೊಡೆಯುವ ಹಸಿರಿನ ಸಂಕೇತದ ಚಿಹ್ನೆಗಳನ್ನು ಬಲಭಾಗದಲ್ಲಿ ಮತ್ತು ಒಣಗಿದ ಮರದ ಖಾಂಡವನ್ನು ಕಪ್ಪು ಬಣ್ಣದಿಂದ ಚಿತ್ರಿಸಿದ್ದು ಕೆಂಪುವರ್ಣದ ಮೆಟ್ಟಿಲುಗಳನ್ನು ಮೇಲಿನ ಲೋಕದ ನಾರಕ್ಕೆ ಹತ್ತಿ ಹೋಗುವ ಸೂಚನೆಯನ್ನು ತೋರುತ್ತದೆ. ಅರ್ಧ ಒಣಗಿ ನೆಲಕ್ಕೆ ಒರಗಿ ಬಿದ್ದ ಎಲೆಯೂ ಇಡೀ ಪರಿಸರ ತಳಮಳವನ್ನು ಬಿಂಬಿಸುವ ರೀತಿಯದ್ದಾಗಿದೆ.

### ೪. ವೈಯಕ್ತಿಕ ಚಿತ್ರಗಳು

ಒಬ್ಬ ಕಲಾವಿದರು ಕೇವಲ ಸಾಮಾಜಿಕ, ರಾಜಕೀಯ ಹಾಗೂ ಇನ್ನಿತರ ಕಲಾಕೃತಿಗಳನ್ನು ರಚಿಸಬೇಕು ಎಂದೇನಿಲ್ಲ. ಕಲಾವಿದರಿಗೆ ಅಭಿವ್ಯಕ್ತಿ ಸ್ವತಂತ್ರವಿರುವುದರಿಂದ ಕಲಾವಿದರು ತಮ್ಮ ಭಾವನೆಗಳನ್ನು ಹೆಚ್ಚಾಗಿ ಅಭಿವ್ಯಕ್ತಿಪಡಿಸುತ್ತಾರೆ. ವಿವಿಧ ಕಲಾ ಕೃತಿಗಳನ್ನು ರಚಿಸುತ್ತಾರೆ. ಸರ್ರಿಯಲಿಸಂನಲ್ಲಿ ಹೆಚ್ಚಾಗಿ ಕಲಾವಿದರು ತಮ್ಮ ವೈಯಕ್ತಿಕ ವಿಚಾರಗಳನ್ನೇ ವ್ಯಕ್ತಪಡಿಸಿರುವುದು ಕಂಡುಬರುತ್ತದೆ. ಅದು ಹೇಗೆಂದರೆ ಕಲಾವಿದರು ಮನಸ್ಸಿನಲ್ಲಿ ಕಾಡುತ್ತಿರುವಂತಹ ಯೋಚನೆಗಳು ಮತ್ತು ಕನಸಿನ ಲೋಕದ ಭಾವನೆಗಳನ್ನು ಅಭಿವ್ಯಕ್ತಪಡಿಸುತ್ತಾರೆ. ಈ ನಿಟ್ಟಿನಲ್ಲಿ ನಾವು ಸಾಲ್ವರ್‌ಡಾಲಿ ಕಲಾಕೃತಿಗಳ್ನು ನೋಡಬಹುದಾಗಿದೆ. ಸಿಗ್ಮಂಡ್ ಫ್ರಾಯ್ಡ್‌ನ ಸಿದ್ಧಾಂತಗಳು ಸಹ ವೈಯಕ್ತಿಕ ಭಾವನೆಗಳನ್ನೇ ಹೇಳುತ್ತವೆ ಎಂದರೆ ತಪ್ಪಾಗಲಾರದು. ಪ್ರಸ್ತುತ ಅಧ್ಯಯನದಲ್ಲಿ ಕರ್ನಾಟಕದ ಕಲಾಕೃತಿಗಳಲ್ಲಿ ವೈಯಕ್ತಿಕ ಚಿತ್ರಗಳು ಎಂದು ವರ್ಗೀಕರಿಸಲಾಗಿದೆ. ಈ ನಿಟ್ಟಿನಲ್ಲಿ ಸರ್ರಿಯಲಿಸಂ ಅಂಶಗಳನ್ನು ಒಳಗೊಂಡ ವೈಯಕ್ತಿಕ ಚಿತ್ರಗಳನ್ನು ರಚಿಸುವ ಈಶ್ವರ್ ಪ್ರಸಾದ್, ಚಂದ್ರನಾಥ್ ಆಚಾರ್ಯ, ಗುರುಸಿದ್ಧಪ್ಪ, ನಂದಬಸಪ್ಪಾ ವಾಡೆ, ವೀರೇಶ ರುದ್ರಸ್ವಾಮಿ, ನಿಂಗರಾಜ ಪಾಟೀಲ್ ಮುಂತಾದ ಕರ್ನಾಟಕದ ಕೇಲವು ಕಲಾವಿದರ ಕಲಾಕೃತಿಗಳನ್ನು ವಿಶ್ಲೇಷಿಸಲಾಗಿದೆ. ಇವುಗಳನ್ನು ಒಂದೊಂದಾಗಿ ನೋಡಬಹುದಾಗಿದೆ.

೧. ಚಂದ್ರನಾಥ ಆಚಾರ್ಯ: ಇವರ ಒಂದು ಕಲಾಕೃತಿಯು ತೈಲವರ್ಣದ್ದಾಗಿದ್ದು, ವಿಭಿನ್ನ ಶೈಲಿಯಲ್ಲಿ ಸರ್‍ರಿಯಲಿಸಂ ಅಂಶಗಳನ್ನು ಬಳಸಿಕೊಂಡು ರಚಿಸಿದ್ದಾರೆ. ಇದರಲ್ಲಿ ಭಾರತೀಯ ಸಂಸ್ಕೃತಿಯಾದ ಸಂಪ್ರದಾಯ, ಕಲೆ, ಜನಪದ ಕಲೆ ಜೊತೆಗೆ ಆಧುನಿಕರಣದ ಸಮ್ಮಿಲನ ಮಾಡಿ ತಮ್ಮದೇ ಆದ ಹೊಸ ಶೈಲಿಯೊಂದನ್ನು ಸೃಷ್ಟಿಸಿಕೊಂಡಿದ್ದಾರೆ. ಈ ಕಲಾಕೃತಿಯಲ್ಲಿ ಕುದುರೆಯ ಮೇಲೆ ಸವಾರಿ ಮಾಡುತ್ತಿರುವ ರಾಜ, ರಾಣಿಯರು ಸವಾರಿಸುತ್ತಿದ್ದಾರೆ. ಇದರಲ್ಲಿ ರಾಣಿಯ ಚಿತ್ರ ತೊಗಲು ಗೊಂಬೆ ಚಿತ್ರದ ಶೈಲಿಯನ್ನು ಹೋಲುತ್ತದೆ. ರಾಜ ನೈಜ ಶೈಲಿಯಲ್ಲಿ ನೇರಳೆ ವರ್ಣದಿಂದ ಚಿತ್ರಿಸಿದ್ದಾರೆ. ಕಣ್ಣಿಗೆ ಕೂಲಿಂಗ್‌ಗ್ಲಾಸ್ ಹಾಕಲಾಗಿದ್ದು, ಕುದುರೆಯನ್ನು ಓಡುತ್ತಿರುವ ರೀತಿ ಚಿತ್ರಿಸಿದ್ದಾರೆ. ಹಿನ್ನೆಲೆಯಲ್ಲಿ ಎಡ ಮತ್ತು ಬಲ ಬದಿಯಲ್ಲಿ ಸಿಂಹಗಳ ಮುಖವನ್ನು, ನಾಲಗೆ ಚಾಚಿದ ರೀತಿಯಲ್ಲಿ ಚಿತ್ರಿಸಿದ್ದಾರೆ. ಇದರಲ್ಲಿ ದಿಕ್ಸೂಚಿಯನ್ನು ಬಳಸಿಕೊಂಡಿದ್ದಾರೆ. ಒಟ್ಟಿನಲ್ಲಿ ಇದು ಒಂದು ಸರ್‍ರಿಯಲಿಸಂ ಪಂಥದ ಅಂಶವನ್ನು ಒಳಗೊಂಡಿದ್ದು ವರ್ಣ ಸಂಯೋಜನೆ ಮಾರ್ಮಿಕವಾಗಿ ಮೂಡಿ ಬಂದಿದೆ.

೨. ಚಂದ್ರನಾಥ ಆಚಾರ್ಯರ ಇನ್ನೊಂದು ಕಲಾಕೃತಿಯಲ್ಲಿ ಸಂಪ್ರದಾಯ ಶೈಲಿಯಲ್ಲಿ ಒಬ್ಬ ಮಹಿಳೆಯನ್ನು ಚಿತ್ರಿಸಿದ್ದಾರೆ. ಇದರಲ್ಲಿ ನೀಲಿವರ್ಣ ಹೆಚ್ಚಾಗಿ ಬಳಸಿದ್ದು, ಇದರಲ್ಲಿ ವಿಚಿತ್ರ ಆಕೃತಿಯ ಮನುಷ್ಯನ ಚಿತ್ರವನ್ನು ಬಿಡಿಸಿದ್ದಾರೆ. ನಾಯಿಯೊಂದು ಚಿತ್ರಿಸಿದ್ದಾರೆ. ಅದರ ಮುಖದಲ್ಲಿ ಏನೋ ಒಂದು ಭಾವನೆ ಎದ್ದು ಕಾಣುತ್ತದೆ. ರಾಜನ ಕತ್ತಿಯೊಂದನ್ನು ಬಿಡಿಸಲಾಗಿದೆ. ಹಿನ್ನೆಲೆಯಲ್ಲಿ ಸಿಂಹಾಸನದ ಒಂದು ಕಾಲು ಮಾತ್ರ ಕಾಣುವಂತೆ ಪರದೆಯಿಂದ ಮುಚ್ಚಲಾಗಿದೆ. ಮತ್ತು ಗಿಡ, ಚಂದಿರನನ್ನು ಸಹ ಚಿತ್ರಿಸಿದ್ದಾರೆ. ಒಟ್ಟಿನಲ್ಲಿ ಈ ಚಿತ್ರ ಏನೋ ನಿಗೂಢತೆಯನ್ನು ಅಡಗಿರುವ ರೀತಿಯಲ್ಲಿ ಸರ್‍ರಿಯಲಿಸಂ ಅಂಶಗಳನ್ನು ಒಳಗೊಂಡಿದೆ ಎಂದು ಹೇಳಬಹುದು.

೩. ಕಲಾವಿದ ಈಶ್ವರ್ ಪ್ರಸಾದ್‌ರ ಅಕ್ರಾಲಿಕ್ ಮಾಧ್ಯಮದ ಈ ಕಲಾಕೃತಿಯಲ್ಲಿ ಅತೀ ಸೌಮ್ಯವಾದ ಚಿತ್ರವನ್ನು ಮತ್ತು ಒಂದು ರೀತಿಯ ಆಲೋಚನೆಯ ಲಹರಿಯನ್ನು ಈ ಚಿತ್ರದಲ್ಲಿ ಸೂಕ್ಷ್ಮವಾಗಿ ಕಟ್ಟಿಕೊಟ್ಟಿದ್ದಾರೆ. ಜಗದ ತುಂಬಾ ಜನಜಂಗುಳಿಗಳ ಮಧ್ಯ ಇಲ್ಲೊಂದು ಶಾಂತ ಚಿತ್ತವಾದ ಕೋಣೆಯೊಂದರಲ್ಲಿ ಅಧ್ಯಯನ ಮೇಜು ಮತ್ತು ಹಾಸಿಗೆ ದಿಂಬುಗಳನ್ನು ಚಿತ್ರಿಸಿದ್ದಾರೆ. ಮನವನ್ನು–ಮನೆಯನ್ನು ಒಂದು ನಿರ್ದಿಷ್ಟ ಭ್ರಾಂತಿಶಾಂತಿಯನ್ನು ಕಲಾವಿದರು ಸ್ವಚಂದವಾಗಿ ಚಿತ್ರಿಸಲು ಬಲು ಜೋಪಾನವಾಗಿ ಕಟ್ಟಿಕೊಂಡಿದ್ದಾರೆ. ಕಿಟಕಿಯ ನವಿರಾದ ಬೆಳಕನ್ನು ಗೋಡೆಗೆ ತಾಗಿಸಿ ಬಿಡಿಸಿದ ಬಾಗಿಲು ನೀಳ ಹಳದಿಯ ನೆಲಹಾಸಿಗೆ ಮತ್ತು ನೀಲಿ ಬಣ್ಣದಿಂದ ನೆಲದ ಚಿತ್ರವನ್ನು ಹಾಸುಹೊಕ್ಕಾಗಿ ಕಲಾವಿದರು ಚಿತ್ರಿಸುದ್ದಾರೆ.

೪. ಓಡುವ ಓಟದ ಈ ಜೀವನದಲ್ಲಿ ನಿಲ್ದಾಣಕ್ಕೆ ಏದುಸಿರು ಬಿಡುವ ಘಳಿಗೆಯನ್ನು ಕಲಾವಿದರು ಈ ಚಿತ್ರದಲ್ಲಿ ನುಣುಪಾಗಿ ಚಿತ್ರಿಸಿದ್ದಾರೆ. ಕುದುರೆ ಓಟದ ಸಂಕೇತ ಈ ಚಿತ್ರದಲ್ಲಿ ಹಳದಿ ಮತ್ತು ಕಪ್ಪು ಕಾಲಿನ ಕುದರಿಯನ್ನು ಕಾಣಬಹುದು. ಅತಿ ವೇಗದಿಂದ ಓಡುವ ಕುದುರೆಯು ಒಂದು ಕೋಣೆಯಲ್ಲಿ ಇರಿಸಲಾಗಿದೆ. ಕೆಂಪು ವರ್ಣದ ಆಸನವೊಂದನ್ನು ಅದರ ಮೇಲೆ ಕೊಡೆಯಾಕರವನ್ನು

ಚಿತ್ರಿಸಿ ಮಹಾರಾಜನ ಸಿಂಹಾಸನದಂತೆ ಭಾಸವಾಗುವ ರೀತಿಯಲ್ಲಿ ಕಾಣುತ್ತದೆ. ಎರೆಡು ಕಿಟಕಿಯಲ್ಲಿ ಕಾನನದ ಮೋಡ ಮತ್ತು ತಿಳಿ ನೀರಿನಂತೆ ಕಾಣುವ ಚಂದಿರವು ಸಂಕೀರ್ಣದಲ್ಲಿ ಚಿತ್ರಿಸದಿದ್ದರೂ ಗಮ್ಯವಾಗಿ ಎದ್ದು ಕಾಣುವ ರೀತಿಯಲ್ಲಿ ಕಟ್ಟಿಕೊಡಲಾಗಿದೆ. ಇಡೀ ಚಿತ್ರ ವ್ಯಾಖ್ಯಾನಿಸುವುದಾದರೆ ಓಡುವ ಓಟಕ್ಕೆ ಒಂದು ಪ್ರಶಾಂತ ತಲ್ಲಣದ ಸ್ಥಳಕ್ಕೆ ಅಣಿಯಾಗಿ ಧಣಿವಾರಿಸಿಕೊಳ್ಳುವ ನಿಲ್ದಾಣದಂತೆ ಚಿತ್ರಿಸಿದ್ದಾರೆ.

೫. ಕಲಾವಿದರಾದ ಗುರುಸಿದ್ದಪ್ಪ ಅವರು ಕಲಾಕೃತಿ ಚಿತ್ರಿಸುವಲ್ಲಿ ಪ್ರವೀಣರೆಂದು ಈ ಚಿತ್ರವನ್ನು ನೋಡಿದಾಕ್ಷಣ ಅನಿಸುತ್ತದೆ. ಎರೆಡು ಮದವೇರಿದ 'ಜಿರ್ಬಾ' ಗಳ ಕಾದಾಟ ಮತ್ತು ಬಾಲ್ಯದಗೆಳೆಯರ ಹುಡುಗಾಟವನ್ನು ತುಲನೆ ಮಾಡಿಹೊಂದಿಸಿ ಅಚ್ಚು ಕಟ್ಟಾಗಿ ಕಲಾವಿದರು ಚಿತ್ರಿಸಿದ್ದಾರೆ. ಈ ಚಿತ್ರದ ಮೂಲಕ ತಿಳಿಯುವುದೆನೆಂದರೆ ಮನುಷ್ಯನ ದ್ವೇಷ ಮತ್ತು ಕಾದಾಟ ಎರಡು ಪ್ರಾಣಿಯ ಪ್ರತಿರೂಪವಾಗಿದ್ದು ಒಬ್ಬರನ್ನು ಕಂಡರೆ ಇನ್ನೊಬ್ಬರಿಗೆ ಇರುವ ಸಿಟ್ಟು, ತಾತ್ಸಾರ ಮತ್ತು ಅಸೂಹೆಯನ್ನು ಪ್ರಾಣಿ ಎರಡರ ಕಾದಾಟಗಳ ಮೂಲಕ ಹಾಗೂ ಮಕ್ಕಳಿಬ್ಬರ ಬಾಲ್ಯದ ಅರಿಯದಿರುವ ವಯಸ್ಸಿನ ಜಗಳವನ್ನು ಅತೀ ಸುಂದರವಾಗಿ ಚಿತ್ರಿಸಿದ್ದಾರೆ.

೬. ಗುರುಸಿದ್ದಪ್ಪ ನವರ ಈ ಚಿತ್ರದಲ್ಲಿ ನಾಲ್ಕು ಹುಡುಗರು ಅತಿ ಶಕ್ತಿಶಾಲಿಗಳಂತೆ ಹಗ್ಗವನ್ನು ಎಳೆಯುವ ದೃಶ್ಯ ಕಾವ್ಯದಂತೆ ಮಾತನಾಡುತ್ತವೆ ಮೇಲ್ಮುಖದಿಂದ ಹಗ್ಗ ಎಂದು ಕಾಣುವ ಈ ಚಿತ್ರವನ್ನು ಗಮನಿಸಿ ನೋಡಿದರೆ ಎರೆಡು ನಾಯಿಯ ಬಾಲದ ತುದಿಗಳನ್ನು ಹಿಡಿದು ಶಕ್ತಿಯಿಂದ ಎಳೆಯುವ ಸನ್ನಿವೇಷವನ್ನು ಕಲಾವಿದರು ಬೇರೊಂದು ವಿವಿಧಾರ್ಥಗಳನ್ನು ಹೇಳ ಹೊರಟಿದ್ದಾರೆ. ಪ್ರಾಣಿಗಳಿಗಿರುವ ನಿಯತ್ತು, ತಾಳ್ಮೆ ಮತ್ತು ಜೀವನ ಪ್ರೀತಿ ಮನುಷ್ಯರಿಗಿಲ್ಲ ಎಂದು ಚಿತ್ರಿಸಿದ್ದು. ನಾಯಿಯ ಮೌನ ಮತ್ತು ಹುಡುಗರ ಸಿಟ್ಟನ್ನು ಬಾಲದ ಮುಖಾಂತರ ಹೇಳಲು ಕಲಾವಿದರು ಮುಂದಾಗಿದ್ದಾರೆ.

೭. ಜೀವ ವಿಕಾಸಕ್ಕೆ ಬೇಕಾದ ಯಾವುದೇ ವಸ್ತುವಿಲ್ಲದ ನಿರಾಕಾರದ ಭೂ ಮಂಡಲವಾದ ಮರುಭೂಮಿಯ ಜೀವಿ ಒಂಟೆಯನ್ನು ವಿಶಿಷ್ಟ ರೂಪದಲ್ಲಿ ಈ ಚಿತ್ರದಲ್ಲಿ ಕಲಾವಿದರು ಚಿತ್ರಿಸಿದ್ದಾರೆ. ವಿಶಾಲವಾದ ಮರುಭೂಮಿಯಲ್ಲಿ ಏಕಶಿಲೆಯಾಗಿ ನಿಂತಿರುವ ಒಂಟೆಯ ಡುಬ್ಬೆಯ ಮೂಲದಿಂದ ಕಮಲವನ್ನು ಮತ್ತು ಕಮಲದಿಂದ ಒಂದು ರೀತಿಯ ಚಿಗುರೊಡೆಯುವ ಕೃತಿಯನ್ನು ಚಿತ್ರಿಸಲಾಗಿದೆ. ಅಂಥಹ ಮರುಭೂಮಿಯಲ್ಲಿ ಒಂಟೆಯ ನೀರಿನ ಡುಬ್ಬದಿಂದ 'ಕಮಲ ಚಿಗುರೊಡೆದು' ಅತೃಪ್ತ ಆತ್ಮಗಳೂ ಸಹ ಚಿಗುರನ್ನು ಮುತ್ತಿಕ್ಕಲು ಬರುವ ಚತ್ರವನ್ನು ಕೂಡ ಚಿತ್ರಿಸಲಾಗಿದೆ.

೮. 'ಸೆರ್ರಿಯಲಿಸಂ' ಪಂಥದ ಇತ್ತೀಚಿನ ಹೊಸ ಪರಿಚಯವಾಗಿ ನಂದಬಸಪ್ಪ ವಾಡೆ ಅವರನ್ನು ಗುರುತಿಸಲು ಸಾಧ್ಯವಾಗುವುದು ಅವರ ಸೃಜನಶೀಲ ಕಲೆಯ ಮೂಲಕ ಸೃಜನಶೀಲವಾದ ಕಲೆ ಹೊಸ ಆಲೋಚನೆಯ ಭಾಗವಾಗಿ ಮನಸ್ಸಿನ ಸಹಜ ಅಭಿವೃದ್ಧಿಯನ್ನು ಹಿಡಿದಿಡಲು ಕಲಾವಿದರು ಈ ಚಿತ್ರದ ಮೂಲಕ ಪ್ರಯತ್ನಸಿದ್ದಾರೆ. 'ಗ್ರಾಮ್‌ಫೋನ್' ಸಿರೀಸ್‌ಗಳ ಮೂಲಕ ಕೌದಿಯ ಹೊಳಪನ್ನು

ನೀಡುವುದರ ಮೂಲಕ ಕಲಾವಿದರ ಅಭಿವ್ಯಕ್ತ ಒಂದು ಆವರಣವನ್ನು ಅನಾವರಣ ಮಾಡಿದ್ದಾರೆ. ಕಲೆಗೆ ಮುಖ್ಯವಾದ ಭಾವಸ್ಫುರಣದ ಹಾದಿಯಲ್ಲಿ ಸೆಳೆಯುವ ಈ ಕಲಾಕೃತಿ ಮಗುವಿನ ಮುಗ್ದವಾದ ತುಂಟತನ ಛಾಯೆಯಿಂದ ಸಹೃದಯನನ್ನು ಸೆಳೆಯುತ್ತದೆ. ಮೂರ್ತದಿಂದ ಅಮೂರ್ತತೆಯಿಂದ ಹಿಡಿಯಬಹುದಾದ ಅರ್ಥವನ್ನು ಸಹೃದಯ ಹುಡುಕಿಕೊಳ್ಳಲು ಪ್ರವೇಶಿಕೆ ಒದಗಿಸುತ್ತದೆ 'ಅಕ್ರ್ಯಲಿಕ್' ವರ್ಣ ಮಾಧ್ಯಮದಿಂದ ಕೂಡಿದ ಈ ಕಲಾಕೃತಿ ಪ್ರತಿಯೊಬ್ಬನಲ್ಲಿಯ ಹುದುಗಿರುವ ಸುಪ್ತ ಮನಸ್ಸಿನ ಭಾವಾವೇಶವನ್ನು ಹೊಳೆಯಿಸುತ್ತದೆ. ಕಲಾವಿದರು ಕಲೆಯ ಆರಾಧನದ ಗುಣದಲ್ಲಿ ರೂಪಿಸಿಕೊಂಡ ಭಾವಗಳು ಕೇವಲ ಕಲಾವಿದರ ಭಾವನೆಗಳು ಮಾತ್ರವಲ್ಲ ಅದು ಪ್ರತಿಯೊಬ್ಬನಲ್ಲಿಯ ನೆರೆ ನೆರೆಯಾದ ಎಳೆತನ ಅದನ್ನು ಬಿಂಬಿಸುವಲ್ಲಿ ಕಲಾವಿದರು ಪ್ರಯತ್ನಾತ್ಮಕವಾದ ಅಂಶಗಳನ್ನು ಹೊಂದಿದ್ದಾರೆ. ಈ ವಿಷಯಗಳಿಂದ ಅವರಲ್ಲಿ 'ಸೆರ್ರಿಯಲಿಸಂ'ನ ಅಂಶಗಳನ್ನು ಗುರುತಿಸಲು ಸಾಧ್ಯವಾಗಿದೆ.

೯. 'ಗ್ರಾಮಾಫೋನ್' ಮತ್ತು 'ಕೌದಿ'ಯ ರೂಪಕದಿಂದ ಪ್ರವೇಶಿಕೆಯನ್ನು ನೀಡುವ ನಂದಬಸಪ್ಪ ವಾಡೆ ಅವರ ಮತ್ತೊಂದು ಕಲಾಕೃತಿಯು ಅಕ್ರ್ಯಲಿಕ್ ವರ್ಣದ್ದಾಗಿದ್ದು ಇದು 'ಗ್ರಾಮ್‌ಫೋನ್'ಗೆ ವಿಭಿನ್ನವಾದ ಸ್ವರೂಪವನ್ನು ನೀಡುವ ದಾಸವಾಳದ  ಹೂವನ್ನು ಕಲಾವಿದರ ಸೃಜನಶೀಲ ಗ್ರಹಿಕೆಗೆ ನಿಲುಕಿದ ಹೊಸ ಸೃಷ್ಟಿಯಾಗಿದೆ ಇದರಿಂದ ಕಲಾವಿದರು ತಮ್ಮ ಸ್ವಂತಿಕೆಯನ್ನು ಬಿಂಬಿಸುವಲ್ಲಿ ವಿಶಿಷ್ಟವಾದ ಕಲಾ ಆರಾಧಕರಾಗಿದ್ದಾರೆ ಮೇಲಿನ ಕಲಾಕೃತಿಯಂತೆ ಈ ಕಲಾಕೃತಿಯಲ್ಲಿನ ಮಗುವಿನ ಮುಗ್ದದಿಂದ ಆಲಿಕೆಯನ್ನು ಕಲಾಪೋಷಣಾ ಗುಣವುಳ್ಳದ್ದಾಗಿದೆ. ಯಾವುದೇ ಒಂದು ಕಲಾಕೃತಿಯ ಮೂರ್ತ ಪಡೆಯುವುದು ಸಹೃದಯಲ್ಲಿ ಈ ಕಾಲವಿದರು ಅನುಭವದ ಹಿಡಿಯುವಿಕೆಯೇ ಅವರ ಕಲಾಕೃತಿಯಲ್ಲಿನ ಕೌದಿಯ ಒಂದೊಂದು ಎಳೆಗಳಾಗಿ ತೋರತ್ತವೆ. ಸೃಜನಶೀಲ ಗುಣಗಳುಳ್ಳ ಈ ಕಲಾಕೃತಿಗಳ 'ಸರ್ರಿಯಲಿಸಂ'ನ ಅಂಶಗಳನ್ನು ಒಳಗೊಂಡ ಅದರ ಭಾಗವಾಗಿದೆ.

೧೦. ಸೆರ್ರಿಯಲಿಸಂ'ನ ಭಾಗವಾದ ಈ ಚಿತ್ರ ನಿಂಗರಾಜ ಪಾಟೀಲರ ಸೃಜನಶೀಲತೆಯ ಕೈಗನ್ನಡಿ ಮನುಷ್ಯನ ವಿಕಾಸವನ್ನು ಬಿಂಬಿಸುವ ಡಾರ್ವಿನ್ನಿನ ವಿಕಾಸವಾದ ಸಿದ್ಧಾಂತವನ್ನು ನಿರೂಪಿಸುವ ಈ ಚಿತ್ರ ಹೇಳಹೊರಟಿರುವ ಅರ್ಥ ಸ್ಫುರಣ ವಿಶಿಷ್ಟವಾದ ನೆಲೆಯಿಂದ ಕೂಡಿದ್ದು, ಕಲಾವಿದರ ವಿಚಾರ (Idea) ಈ ಕುರಿತಾದ ಚಿಂತನೆಯನ್ನು ಕಂಡುಕೊಂಡಿರುವುದು ಡಾರ್ವಿನ್ ಸಿದ್ಧಾಂತವನ್ನು ತಲೆಕೆಳಗಾಗಿಸುವಂತೆ ಈ ಚಿತ್ರ ಮಾಡುತ್ತದೆ. ಯುಗ-ಯುಗಗಳಿಂದಲೂ ಮಂಗನಿಂದ ಮಾನವನ್ನಾಗುವ ಸಿದ್ಧಾಂತ ಇಂದು ಸುಳ್ಳು ಎಂದು ತೋರುವಲ್ಲಿ ಈ ಚಿತ್ರದ ಪಾತ್ರ ಮುಖ್ಯವಾದದ್ದು ಈಗ ಈ ಸಿದ್ಧಾಂತ ಸುಳ್ಳು ಎಂದು ಸಂಶೋಧನೆಗಳು ಹೇಳುತ್ತವೆ. ಅದರ ಭಾಗವಾದ ಈ ಚಿತ್ರದಲ್ಲಿ ಮಂಗಗಳು ಮನುಷ್ಯನ ಬುದ್ಧಿ ಶಕ್ತಿಯ ಬೆಳೆವಣಿಗೆಯಿಂದ ಬೆರಗುಗೊಂಡ ತಮ್ಮ ಅಳಲನ್ನು ತೋಡಿಕೊಂಡ ಭಾವವನ್ನು ವ್ಯಕ್ತ ಪಡಿಸುತ್ತವೆ ಲಕ್ಷಾಂತರ ವರ್ಷಗಳಿಂದಲೂ ಮಂಗಗಳು ಮಂಗಗಳಾಗಿಯೇ ಉಳಿದಿರುವ ಅವುಗಳ ಬುದ್ಧಿ ಶಕ್ತಿ ಬೆಳೆಯದೇಇರುವ ಸತ್ಯವನ್ನು ಕಲಾವಿದರು ಈ ಚಿತ್ರದಲ್ಲಿ ಬಿಚ್ಚಿಟ್ಟಿದ್ದಾರೆ ಮನಷ್ಯನ ನಾಗರಿಕತೆಯು ಇಂದು ವಾಹಿಸಲಾರದಷ್ಟು ಮಶಸ್ವಿರೂಪದಲ್ಲಿ

ದಾಪುಗಾಲು ಹಾಕುತ್ತಿವೆ. ಆದರೆ ಈ ಮಂಗಗಳಳಯ ಮಾತ್ರ ಅಮಗಳಗೆ ಈ ಭಾಗ್ಯ ಇಲ್ಲಿ ಎಂಬುದೇ ಆಗಿದೆ ಮನುಷ್ಯ ತನ್ನ ಸುಪ್ತವಾದ ಮನಸ್ಸಿನ ನೆಲೆಯಿಂದ ಸತ್ಯಗಳನ್ನು ಕಂಡು ಕೊಳ್ಳುವ ಗುಣಮಳ್ಳದ್ದಾಗಿದೆ ಸರ್‍ರಿಯಲಿಸಂ ಗುಣಗಳನ್ನು ಈ ಕಲಾವಿದರ ಚಿತ್ರಗಳಲ್ಲಿ ವಿಶೇಷವಾಗಿ ಗುರುತಿಸಬಹುದು.

೧೧. ವೀರೇಶ್ ರುದ್ರಸ್ವಾಮಿ ಅವರು ಈ ಚಿತ್ರದಲ್ಲಿ ಅತಿ ಗೌಣವಾಗಿ ಚಿತ್ರವೀಕ್ಷಕರನ್ನು ಚಿತ್ರಕೃತಿಯ ಮೂಲಕ ಹಿಡಿದಿಟ್ಟುಕೊಳ್ಳಲು ಪ್ರಯತ್ನಿಸಿದ್ದಾರೆ. ಸಪ್ತಸಾಗರದಾಚೆಗಿನ ಒಂದು ದಿವ್ಯಲೋಕದ ಭೂಮಂಡಲಾಕೃತಿಯ ಬಿಂಬವೊಂದನ್ನು ನೀಲಿಮಯ ಮತ್ತು ಬಿಳಿ ಬಣ್ಣಗಳ ಮೂಲಕ ಚೌಕಾಕಾರದ ಚಿಕ್ಕ-ಚಿಕ್ಕ ಚಿತ್ರಗಳ ಮೂಲಕ ಮೇಲ್ನೋಟದ ಗೊಂದಲಗಳನ್ನು ಭೂಮಂಡಲಾಕೃತಿಯಲ್ಲಿ ಬಿಡಿಸಿದ್ದಾರೆ. ಬಾಹ್ಯಕಾಶದ ನಕಶಿಕಾಂತ ಲೋಕದ ಅನಂತವಾಗಿರುವ ಇನ್ನೊಂದು ಲೋಕವನ್ನೂ ಸರಳೀಕೃತವಾಗಿ ಸಾಗರ ಮತ್ತು ಭೂಮಂಡಲಾಕೃತಿ ಮೂಲಕ ಈ ಚಿತ್ರದಲ್ಲಿ ಕಲಾವಿದರು ಚಿತ್ರಿಸಿದ್ದಾರೆ.

೧೨. ವೀರೇಶ್ ರುದ್ರಸ್ವಾಮಿಯವರ ಈ ಚಿತ್ರದಲ್ಲಿ ಗೋಚರಿಸುವ ಮತ್ತು ಒಂದು ಅಲೌಖಿಕ ಅರ್ಥವನ್ನು ಕಾಣುವಂತ ವಿಚಾರವೆಂದರೆ ಅದುವೆ 'ಬಂಧನದ ಬದುಕು'. ಕಲಾವಿದರು ಈ ಚಿತ್ರದಲ್ಲಿ ಬದುಕಿನ ಬಂಧನಗಳು, ನಿಯಮಗಳು, ಜೀವನದ ತಾಕಲಾಟಗಳನ್ನು ಸರಪಳಿಯ ಬಂಧನವನ್ನೂ ವರ್ಣರಂಜಿತವಾಗಿ ಮತ್ತು ಒಂದು ರೀತಿಯ ಬೌದ್ಧಿಕ ಮತ್ತು ಮಾನಸಿಕ ಬಂಧನವನ್ನು ಅದರೊಳಗಿನ ಬದುಕಿನ ಪರದಾಟಗಳಲ್ಲಿಯ ವಿಶೇಷ ಭ್ರಮಾಲೋಕವನ್ನು ಅದಮ್ಯವಾಗಿ ಕಲಾವಿದರು ಚಿತ್ರಿಸಿದ್ದಾರೆ. ಜೊತೆಗೆ ಇಡೀ ಭೂಪಟಲದಲ್ಲಿರುವ ಸಾಗರ, ಭೂಮಿ, ಎಲ್ಲವನ್ನೂ ಒಂದು ರೀತಿಯ ಬಾಹುಬಂಧನಕ್ಕೆ ಸಿಕ್ಕಿಸಿದಂತೆ ಭಾಸವಾಗುವ ರೀತಿಯಲ್ಲಿ ಅಮೋಘವಾಗಿ ಚಿತ್ರಿಸಿದ್ದಾರೆ.

೧೩. ಸರ್‍ರಿಯಲಿಸಂ ಪಂಥದ ಕಲಾವಿದ ವಿರೇಶ ರುದ್ರಸ್ವಾಮಿ ಅವರು ಈ ಚಿತ್ರದ ಮೂಲಕ ಸೃಷ್ಟಿಸಿರುವ ಭಾವ ಜಗತ್ತು ವಿಡಂಭನೆಯಿಂದ ಮತ್ತು ಗಂಭೀರವಾಗಿ ರೂಪಗೊಂಡಿದೆ. ಜಗತ್ತಿನಲ್ಲಿ ಸಂಭವಿಸಿದ ಸಾವಿರಾರು ಬದಲಾವಣೆಗಳಿಗೆ ಮನುಷ್ಯನು ಒಂದಲ್ಲ ಒಂದು ರೀತಿಯ ಪ್ರತಿಕ್ರಿಯೆಯನ್ನು ನೀಡುತ್ತಾ ಬಂದಿದ್ದಾನೆ. ಭಾರತದಲ್ಲಿ ಆಧುನಿಕತೆ ಸಂಭವಿಸಿದ ನಂತರ ಅನೇಕ ಬದಲಾವಣೆಗಳು ಆದವು. ಮುಖ್ಯವಾಗಿ ಆಶ್ರಯ ತಾಣಗಳ ಮೇಲೆ ಹಳೆಯ ಕಲಾ ವಿನ್ಯಾಸದ ಬದಲಾಗಿ ಹೊಸದಾದ ಚಿಂತನೆಗಳು ವಿನ್ಯಾಸ ರೂಪ ಪಡೆದವು ಅದಕ್ಕೆ ಮುಖ್ಯ ಕಾರಣ ಪಾಶ್ಚಾತ್ಯ ಸಂಸ್ಕೃತಿಯ ಮುಕ್ತವಾದ ಪ್ರವೇಶಿಕೆ ರುದ್ರಸ್ವಾಮಿಯವರು ಈ ಕಲಾಕೃತಿಯ ಮೂಲಕ ಆಶ್ರಯ ತಾಣಗಳ ಆಧುನಿಕರಣ ಗುಣವನ್ನು ಮತ್ತು ಅವು ಸೃಷ್ಟಿಸಿದ ಸಂಕಟಗಳನ್ನು ನಿರೂಪಿಸುತ್ತದೆ. ಕಟ್ಟಡದ ಪಿಲ್ಲರ್ ಒಂದರಿಂದ ಹಾದು ಬಂದ ಕಬ್ಬಿಣದ ಸಳಿಗಳು ಮನುಷ್ಯನ ಮೆದುಳನ್ನು ಚುಚ್ಚುವ ಪರಿಯಾಗಿ ರೂಪಕದ ದೃಷ್ಟಿಗಳಿಂದ ನಿರೂಪಿಸಿದ್ದಾರೆ. ಪ್ರತಿನಿತ್ಯ ನಗರವೊಂದರಲ್ಲಿ ಆನೆ ಕೊಡೆಗಳಿಂತೆ ಏಳುವ ನೂರಾರೂ ಕಟ್ಟಡಗಳಲ್ಲಿ ಸಂಭವಿಸುವ ಸಾವಿನ ವಿವರಗಳನ್ನು ಲೆಕ್ಕ ಹಾಕಲು ಆಗುವುದಿಲ್ಲ. ಆದರೆ ಕಲಾವಿದ

ಈ ಚಿತ್ರದ ಮೂಲಕ ಅದರ ಪ್ರಖರತೆಯನ್ನು ಮತ್ತು ಆಧುನಿಕ ಮನುಷ್ಯ ವಿರೋಧಿ ನಿಲುವುಗಳನ್ನು ಕಡಾಖಂಡಿತವಾಗಿ ಕಲಾವಿದರು ಹೇಳಿದ್ದಾರೆ.

೧೪. ದೊಣ್ಣೆಗಳ ಬಳಕೆ ಸೃಜನಶೀಲವಾಗಿದ್ದರೆ. ಸರ್ರಿಯಲಿಸಂನ ಲಕ್ಷಣಗಳು ತಾನಾಗಿಯೇ ಹೊಮ್ಮುತ್ತವೆ. ವಿರೇಶ ರುದ್ರಸ್ವಾಮಿಯವರು ಈ ಚಿತ್ರದ ಮೂಲಕ ಬಣ್ಣಗಳನ್ನು ಸೃಜನಶೀಲವಾಗಿ ಬಳಸಿಕೊಂಡಿದ್ದಾರೆ. ಗೋಲಾಕಾರದ ವೃತ್ತವೊಂದರ ಬಣ್ಣಗಳು ಚಿತ್ರದಲ್ಲಿ ಬ್ಯಾಗ್‌ರೌಂಡ್‌ಗೆ ಬಳಸಿರುವ ಬಣ್ಣದಗಳ ಇಣುಕು ನೋಟವಾಗಿವೆ. ಕಲಾಕೃತಿ ಬಣ್ಣಗಳಿಂದ ಭೂಮಿಯ ಅಸ್ತಿತ್ವದ ವಿವಿಧ ಸ್ಥರಗಳನ್ನು ತೋರಿಸುತ್ತದೆ. ಒಂದು ಕಲಾಕೃತಿ ಮನಸ್ಸಿಗೆ ಆನಂದಕರ ಎನಿಸಲು ಅದರ ವಿಶೇಷ ಗುಣಗಳಿಂದ ಮಾತ್ರ ಸಾದ್ಯ ಏಕ ಬಣ್ಣದ ಅಸ್ತಿತ್ವಕ್ಕು ಬಹುರೂಪಿಯ ಬಳಕೆಗೂ ಸೃಜನಶೀಲತೆ ನಡುವಿನ ಕೊಂಡಿಯಾಗಿ ಕೆಲಸ ಮಾಡುತ್ತದೆ. ಒಂದು ವಸ್ತುವಿನ ಅಥವಾ ವ್ಯಕ್ತಿಯ ಪಾತ್ರ ಹೊಮ್ಮಬೇಕಾದರೆ ಬಣ್ಣಗಳ ಬಳಕೆ ತುಂಬಾ ಮುಖ್ಯವಾದದ್ದು. ವಿರೇಶ ರುದ್ರಸ್ವಾಮಿಯವರು ಈ ಚಿತ್ರದ ಮೂಲಕ ಈ ಸತ್ಯವನ್ನು ನಿರೂಪಿಸಿದ್ದಾರೆ.

೧೫. ಜಲವರ್ಣದ ಈ ಕಲಾಕೃತಿಯಲ್ಲಿ ಕಬ್ಬಿಣದ ಸಲಾಕೆಗಳಿಂದ ಎದುರುಗೊಳ್ಳುವ ಈ ಚಿತ್ರ ರೇಖಾಗಣಿತದ ಒಳಗಿನ ರಹಸ್ಯಗಳನ್ನು ಬಯಲು ಮಾಡುವಂತಿದೆ. ಎಲ್ಲಿಯ ವರೆಗೆ ಒಬ್ಬ ಕಲಾವಿದ ಸಿಮೋಲಂಘನ ಗುಣವನ್ನು ಅಳವಡಿಸಿಕೊಳ್ಳುವುದಿಲ್ಲವೊ ಅಲ್ಲಿಯ ವರೆಗೆ ಅವನ ಕಲಾಕೃತಿಯನ್ನು ಸೃಜನಶೀಲ ಕಲಾಕೃತಿ ಎಂದು ಕರೆಯುವುದು ಕಷ್ಟ. ಆದರೆ ಈ ಕಲಾವಿದ ಬಂಧನ ಒಳಗಿಂದ ಬಿಡುಗಡೆಯ ಬಯಲನ್ನು ಚಿತ್ರದರು ಮೂಲಕ ತೋರಿಸುತ್ತಿದ್ದಾರೆ. ವಿರೇಶ ರುದ್ರಸ್ವಾಮಿಯವರ ಈ ಕಲೆಗೆ ಸಹೃದಯರು ಮನಸೋಲದೆ ಇರಲಾರರು. ಎದರುಗೊಳ್ಳುವ ಆಕೃತಿಗಳಿಂದ ಕಣ್ಣಾಚೆಗಿರುವ ನಿರ್ಭಯಲನ್ನು ನೀಳ ಆಕಾಶದ ನೀಲಿಯ ರೂಪಕವಾಗಿ ತೋರಿಸುತ್ತಿದ್ದಾರೆ. ಸರ್ರಿಯಲಿಸಂನ ಮೂಲಗುಣಗಳು ಈ ಚಿತ್ರದಲ್ಲಿ ಅಡಗಿದೆ.

ಒಟ್ಟಿನಲ್ಲಿ ಹೇಳುವುದಾದರೆ ಮೇಲಿನ ಸಾಮಾಜಿಕ, ರಾಜಕೀಯ, ನೈಸರ್ಗಿಕ ಮತ್ತು ವೈಯಕ್ತಿಕ ಚಿತ್ರಗಳನ್ನು ಗಮನಿಸಿದಾಗ ಸಾಮಾಜಿಕ ಮತ್ತು ವೈಯಕ್ತಿಕ ಚಿತ್ರಗಳು ಹೆಚ್ಚಾಗಿ ಕಾಣಿಸುತ್ತವೆ. ಅವುಗಳಲ್ಲಿ ಸಾಮಾಜಿಕ ಚಿತ್ರಗಳು ತಂಬಾ ಅರ್ಥಪೂರ್ಣವಾಗಿರುವವು. ಈ ಕಲಾಕೃತಿಗಳಲ್ಲಿ ಸರ್ರಿಯಲಿಸಂ ಅಂಶಗಳೇ ಹೆಚ್ಚಾಗಿ ಕಂಡುಬರುತ್ತವೆ. ವೈಯಕ್ತಿಕ ಚಿತ್ರಗಳಲ್ಲಿ ಸಹ ತಮ್ಮ ತಮ್ಮ ಮನಸ್ಸಿನ ಭಾವನೆಗಳನ್ನು ಪ್ರಾಣಿ, ಮನುಷ್ಯ, ವಿವಿಧ ಕಲಾಕೃತಿಗಳನ್ನು ಬಳಸಿಕೊಂಡು ಚಿತ್ರಿಸಿರುವುದು ಕಂಡುಬಂದಿವೆ. ನೈಸರ್ಗಿಕ ಚಿತ್ರಗಳಲ್ಲೂ ಸಹ ಗ್ರಾಮೀಣ ಪ್ರದೇಶದ ದೃಶ್ಯಗಳನ್ನು ತಮ್ಮದೇ ಆದ ಶೈಲಿಯಲ್ಲಿ ರಚಿಸಲ್ಪಟ್ಟಿವೆ. ಕಲಾವಿದರುಗಳು ಇನ್ನು ರಾಜಕೀಯ ಚಿತ್ರಗಳು ಕಡಿಮೆ ಇದ್ದರೂ ಸಹ ಅದರಲ್ಲಿ ಒಂದು ಒಳ್ಳೆಯ ಸಂದೇಶಗಳು ಎದ್ದು ಕಾಣಿಸುತ್ತವೆ. ಒಟ್ಟಾರೆಯಾಗಿ ಎಲ್ಲ ವಿವಿಧ ಕಲಾಕೃತಿಗಳನ್ನು ಗಮನಿಸುತ್ತಾ ಬಂದರೆ ನಮ್ಮ ಕರ್ನಾಟಕ ಕಲಾವಿದರಲ್ಲಿ ಸರ್ರಿಯಲಿಸಂ ಪಂಥ ಹೇಗೆ ತಮ್ಮದೇ ಆದ ಶೈಲಿಯೊಂದರಲ್ಲಿ ವ್ಯಕ್ತವಾಗುತ್ತಿವೆ ಎಂದು ಹೇಳಬಹುದು. ಅವರ ಬಣ್ಣಗಳ

ಬಳಕೆ, ಯೋಚನಾ ಶಕ್ತಿ, ಮತ್ತು ವಸ್ತು ವಿಷಯಗಳ ಬಗ್ಗೆ ಇದ್ದ ಅರಿವು ಸಹ ತಿಳಿದುಬರುತ್ತದೆ. ಒಟ್ಟಿನಲ್ಲಿ ಈ ಅಧ್ಯಯನದಿಂದ ನನಗೆ ವೈಯಕ್ತಿಕವಾಗಿ ತುಂಬ ವಿಷಯಗಳು ತಿಳಿದುಕೊಳ್ಳಲು ಅನುಕೂಲವಾಗಿದೆ ಮತ್ತು ನನ್ನ ಯೋಚನಾ ಶಕ್ತಿಯಲ್ಲಿ ವಿಭಿನ್ನವಾದ ಸರ್ರಿಯಲಿಸಂ ಪಂಥ ಮೂಡಿದೆ ಎಂದು ಹೇಳಬಹುದು.

* * *

## ಅಧ್ಯಾಯ : ಐದು

## ಸರ್ರಿಯಾಲಿಸಂ ಕಲಾವಿದರ ಸಂಕ್ಷಿಪ್ತ ಪರಿಚಯ

ಚಂದ್ರನಾಥ ಆಚಾರ್ಯ

ಸಿ.ಚಂದ್ರಶೇಖರ

ಚಂದ್ರಹಾಸ್ ಜಾಲಿಹಾಳ

ಸುನೀಲ್ ಮಮದಾಪುರ

ರುದ್ರಗೌಡ ಇಂಡಿ.

ನಂದಬಸಪ್ಪಾ ವಾಡೆ

ವೀರೇಶ ರುದ್ರಸ್ವಾಮಿ

ಸರ್ರಿಯಲಿಸಂ ಬಗ್ಗೆ ಕಲಾವಿದರ ಅನಿಸಿಕೆ

ನಿಂಗನಗೌಡ ಪಾಟೀಲ್

## ಅಧ್ಯಾಯ : ಐದು

## ಸರ್‍ರಿಯಾಲಿಸಂ ಕಲಾವಿದರ ಸಂಕ್ಷೇಪ್ತ ಪರಿಚಯ

### ಚಂದ್ರನಾಥ ಆಚಾರ್ಯ

ಚಂದ್ರನಾಥ ಆಚಾರ್ಯ ಅವರದು ಕರ್ನಾಟಕದ ಕಲಾಜಗತ್ತಿನ ಮಹತ್ವದ ಹೆಸರು. ತಮ್ಮ ಅಸಂಖ್ಯಾತ ರೇಖಾಚಿತ್ರ. ತೈಲವರ್ಣಚಿತ್ರ, ಜಲವರ್ಣಚಿತ್ರಗಳಿಂದ ಕಲಾಕ್ಷೇತ್ರದಲ್ಲಿ ಶಾಶ್ವತ ಸ್ಥಾನಗಳಿಸಿಕೊಂಡಿರುವ ಚಂದ್ರನಾಥ ಆಚಾರ್ಯ್ಯ ಅವರು ನಿರಂತರವಾಗಿ ಹೊಸ ಪ್ರಯೋಗಗಳನ್ನು ಶೋಧಿಸುತ್ತಲೆ ಬಂದವರು. ಇವರು ಸರ್ರಿಯಾಲಿಸಂ ಪಂಥ ಕರ್ನಾಟಕಕ್ಕೆ ತಂದ ಕಲಾವಿದರಲ್ಲಿ ಮೊದಲನೆ ಸಾಲಿನಲ್ಲಿ ಬರುವವರು. ಚಂದ್ರನಾಥ ಆಚಾರ್ಯ ಅವರು ಜನಿಸಿದ್ದು, ದಕ್ಷಿಣ ಕನ್ನಡ ಜಿಲ್ಲೆಯ ಮುತ್ತೂರಿನಲ್ಲಿ ೨೮ ಫೆಬ್ರುವರಿ ೧೯೪೮ ರಂದು ಜನಿಸಿದರು. ಚಂದ್ರನಾಥರ ತಂದೆ ಆ ಕಾಲದಲ್ಲಿ ಹೆಸರಾಂತ ಶಿಲ್ಪಿಯಾಗಿದ್ದರು. ಕಲಾವಿದರ ಕುಟುಂಬದಲ್ಲಿ ಹುಟ್ಟಿ ಬೆಳೆದ ಚಂದ್ರನಾಥ ಅಚಾರ್ಯರಿಗೆ ಕಲೆ ಸಹಜವಾಗಿ ದಕ್ಕಲು ಕೌಟುಂಬಿಕ ಪರಿಸರ ಕಾರಣವಾಯಿತು(ನಿರಂಜನ ಕೆ.ಮಕಾಳೆ, ಚಂದ್ರನಾಥ ಆಚಾರ್ಯ ಅವರ ಕಲಾ ಬದುಕು ಒಂದು ಅಧ್ಯಾಯನ, ಪುಟ, ೫–೭).

ಕೆನ್ ಕಲಾಶಾಲೆಯಲ್ಲಿ ಆರ್ಟ್ಸ್ ಡಿಪ್ಲೋಮಾ ಪಡೆದ ಚಂದ್ರನಾಥ ಆಚಾರ್ಯ ಅವರನ್ನು ವಿಶಿಷ್ಟ ಕಲಾವಿದರನ್ನಾಗಿ ರೂಪಿಸಿದ್ದು ರವೀಂದ್ರನಾಥ ಟಾಗೋರರ ಶಾಂತಿನಿಕೇತನ ರಾಷ್ಟ್ರದ ಉತ್ಕೃಷ್ಟ ಕಲಾವಿದರನ್ನು ರೂಪಿಸಿದ ಕೀರ್ತಿ ಶಾಂತಿನಿಕೇತನಕ್ಕೆ ಸಲ್ಲುತ್ತದೆ. ಶಾಂತಿನಿಕೇತನದಲ್ಲಿ ಕಲಿಯುವ ಅವಕಾಶ ಸಿಕ್ಕಿದ್ದು ನನ್ನ ಜೀವನದ ಮಹತ್ವವೆಂದು ಭಾವಿಸಿಕೊಂಡಿರುವ ಚಂದ್ರನಾಥವರು ತಮ್ಮ ಶಕ್ತಿಯನ್ನು ಅರಿಯಲು ಶಾಂತನಿಕೇತನವನ್ನು ಒಂದು ವೇದಿಕೆಯನ್ನಾಗಿ ರೂಪಿಸಿಕೊಂಡರು ತಮ್ಮದೆಯಾದ ಶೈಲಿಯ ಪದ್ದತಿಯನ್ನು ರೂಪಿಸಿಕೊಳ್ಳಲು ಪ್ರಯತ್ನಿಸಿದ ಚಂದ್ರನಾಥ ಆಚಾರ್ಯರ ಸೃಜನಶೀಲ ಆಲೋಚನೆಗಳು ಸಾಕಾರ ರೂಪ ಪಡೆಯಲು ಕಾರಣವಾದದ್ದು ಶಾಂತಿನಿಕೇತನ. ನಾಲ್ಕು ದಶಕಕ್ಕೂ ಮೀರಿದ ಇವರ ಈ ಸೃಜನಶೀಲ ಪ್ರಮಾಣದಲ್ಲಿ ಹಲವು ಸೃಜನಶೀಲ ಸೋಪಜ್ಞತೆಗಳ ಮೂಲಕ ಕಲೆಯ ಅರ್ಥಸಾಧ್ಯತೆಗಳನ್ನು ವಿಸ್ತರಿಸುತ್ತಲೆ ಬಂದಿದ್ದಾರೆ ಇವರು ಚಿತ್ರಕಲಾವಿದರಂತೆ

ಶಿಲ್ಪಿಗಳು ಹೌದು. ಇವರು ಹತ್ತು ಹನ್ನೇರಡನೆಯ ವಯಸ್ಸಿನಲ್ಲಿಯೆ ಗಾಂಧೀಜಿಯವರ ಶಿಲ್ಪವನ್ನು ರೂಪಿಸಿದ್ದಾರೆ. ಹಾಗೂ ಸುಧಾ, ಮಲ್ಲಿಗೆ, ಇವು ನಿಯತಕಾಲಿಕೆಗಳು ಮತ್ತು ನೂರಾರು ಕಾದಂಬರಿಗಳಿಗೆ ಹಾಗೂ ಧಾರಾವಾಹಿಗಳಿಗೆ ಚಿತ್ರಗಳನ್ನು ರಚಿಸಿಕೊಟ್ಟಿರುವರು.

ಚಂದ್ರನಾಥರವರ ಚಿತ್ರಗಳ ಕುರಿತು ಕವಿ ಕತೆಗಾರರಾದ 'ಜಯಂತ ಕಾಯ್ಕಿಣಿಯವರು' ವ್ಯಕ್ತಪಡಿಸಿರುವ ಅಭಿಪ್ರಾಯ ಪೂರ್ವನಿಯೋಜಿತ ಆಕೃತಿಗಳಲ್ಲಿ ಕಸೂತಿ ತುಂಬುವದಕ್ಕಿಂತ ಕಥನವೊಂದರ ನಿಮಿತ್ತದಿಂದ ಉದ್ದೀಪನಗೊಂಡ ಪ್ರತಿಮೆಗಳಿಗೆ ಶರಣಾಗಿ ಅನೀರಿಕ್ಷಿತ ತಿರುವುಗಳನ್ನು ಪಡೆಯುವುದು ಇವರ ವಿಧಾನ ಹೀಗಾಗಿ ಇವರ ಚಿತ್ರಗಳು ಕಥೆಯನ್ನು ವಿವರಿಸುವುದರ ಬದಲಿಗೆ ಕಥನಕ್ಕೊಂದು ಹೊಸ ಅನುಭವವನ್ನು ಜೋಡಿಸುತ್ತವೆ. ಕಥೆಗಳ ರೂಪಗಳನ್ನು ಸರಳಗೊಳಿಸದೆ ಕತೆಯನ್ನು ಬೇರೊಂದು ಮಜಲಿಗೆ ಹಿಗ್ಗಿಸುತ್ತದೆ(ನಿರಂಜನ ಕೆ.ಮಕಾಳೆ, ಚಂದ್ರನಾಥ ಆಚಾರ್ಯ ಅವರ ಕಲಾ ಬದುಕು ಒಂದು ಅಧ್ಯಾಯನ, ಪುಟ, ೫-೭).

ಕಲಾವಿದನಾದವನು ತನ್ನ ಸಂವಾದವನ್ನು ಪರಿ ಪರಿ ಯಾದ ದೃಶ್ಯ ಪರಿಕರಗಳ ಮೂಲಕ ಓದುಗನನ್ನು ತಲುಪುವ ಕೆಲಸವನ್ನು ಪ್ರಜ್ಞಾಪೂರ್ಕವಾಗಿ ಮಾಡುತ್ತಾ ಬರುತ್ತಾನೆ. ಪ್ರಯತ್ನಪೂರ್ವಕವಾಗಿ ಮೌನಸಂವಾದವನ್ನು ಬೆಳೆಸಿದಷ್ಟು ಆತನಿಗೆ ಸೂಕ್ಷ್ಮ ಮತ್ತು ಹೊಸ ಅಂಶಗಳು ಗೋಚರಿಸಲು ಸಾಧ್ಯವಾಗುತ್ತವೆ ಇಂತಹ ಕ್ರಿಯೆಯನ್ನು ನಿರಂತರ ತಪ್ಪಸಿನಂತೆ ಸಾಧಿಸಿಕೊಂಡು ಬರುತ್ತಿರುವವರು. ಇವರು ಕಲಾವಿದರ ಹೊರಜಗತ್ತಿನ ವಾಸ್ತವದ ಮೇಲೆ ನಂಬಿಕೆ ಇಟ್ಟುಕೊಂಡಿರುವುದರ ಜೊತೆಗೆ ಸೂಕ್ತಮನಸ್ಸಿನೊಂದಿಗೆ ಸಂವಾದ ಮಾಡುತ್ತಾ ಬರುತ್ತಾರೆ. ಇದಕ್ಕೆ ಉದಾಹರಣೆಯಾಗಿ ಸಾಲ್ವರ್ಡಾಲಿ ಅವರನ್ನು ನೋಡಬಹುದು ಇಲ್ಲಿ ಚಂದ್ರನಾಥ ಆಚಾರ್ಯರವರು ಸರಿಯಾಲಿಸಂ ಪಂಥದ ಅಂಶಗಳನ್ನು ಅಳವಡಿಸಲು ಕಾರಣ ಮತ್ತು ಪ್ರಭಾವ ತಿಳಿದುಬರುತ್ತದೆ. ರವೀಂದ್ರನಾಥರ ಶಾಂತಿನಿಕೇತನದಲ್ಲಿ ಕಲಿತ ಇವರಿಗೆ ಪಾಶ್ಚಾತ್ಯರ ಪ್ರಭಾವದಿಂದ ಸರ‍್ರಿಯಾಲಿಸಂ ತಮ್ಮ ಕಲಾಕೃತಿಗಳಲ್ಲಿ ಅಳವಡಿಕೆಯಾಗಿದೆ.

ಚಂದ್ರನಾಥ ಆಚಾರ್ಯ ಅವರು ಯೋಚನೆಗಳು ಅವರ ಸ್ವಪ್ನಲೋಕದ ಅತಿವಾಸ್ತವತೆಯನ್ನು ಪ್ರಜ್ಞೆಯ ಪರಿಧಿಯನ್ನು ಮೀರಿದ ಮನಸ್ಥಿತಿಗಳನ್ನು ಹೇಗೆ ತಮ್ಮ ಕೃತಿಗಳಲ್ಲಿ ಚಿತ್ರಿಸಿದ್ದಾರೆ ಎಂಬುದನ್ನು ಕಾಣಬಹುದು ಅನೇಕ ಬಾರಿ ಮನುಷ್ಯನ ತರ್ಕಕ್ಕೆ ಸವಾಲೊಡ್ಡುವ ಸಂದಿಗ್ದತೆಗೆ ತಳ್ಳುವ ಚಿತ್ರಗಳನ್ನು ಚಂದ್ರನಾಥ ಆಚಾರ್ಯರು ರಚಿಸಿದ್ದಾರೆ. ಕತೆಯ ಜೀವಾಳ ಚಲನಶೀಲತೆಯ ಕಲೆಯಲ್ಲಿ ಬದಲಾವಣೆ ಬೇಕು ಹೊಸತನದ ಆವಿಷ್ಕಾರದಿಂದಾಗಿ ಪ್ರತಿ ಕಲೆಯು ಯಶಸ್ವಿಯಾಗಬಲ್ಲುದು ಹಾಗೆಂದ ಮಾತ್ರಕ್ಕೆ ಹಳೆಯದನ್ನು ಸಂಪೂರ್ಣವಾಗಿ ತಿರಸ್ಕರಿಸಬೇಕು ಎಂದು ಅರ್ಥ ಮಾಡಿಕೊಳ್ಳಬಾರದು ಭೂತ, ವರ್ತಮಾನಕ್ಕೆ ಬುನಾದಿಯಾಗಬೇಕು ಎನ್ನುವುದು ತಿಳಿದುಬರುತ್ತದೆ.

ಹಿಂದಿನ ಅನುಭವವಿಲ್ಲದೆ ಹೊಸದನ್ನು ನಿರ್ಮಿಸಲಾಗದು. ಹೊಸ ಚಿಗುರು ಹಳೆ ಬೇರು ಎಂಬಂತೆ ಗತದಲ್ಲಿ ಭವಿಷ್ಯದ ಬೀಜಗಳು ಹುದುಗಿವೆ. ಆದರೆ ಆಧುನಿಕತೆ ಅಂದರೆ ಚಂದ್ರನಾಥ

ಆಚಾರ್ಯರು ತಮ್ಮ ಕಲಾಕೃತಿಯಲ್ಲಿ ನಮ್ಮ ಸಂಪ್ರದಾಯಿಕ ಶೈಲಿಯ ಕಲೆಯ ಜೊತೆಗೆ ಆಧುನಿಕ ಕಲಾ ಪಂಥ ಸರ್ರಿಯಲಿಸಂವನ್ನು ಅಳವಡಿಸಿಕೊಂಡು ಹೊಸ ಸೃಜನಶೀಲತೆಯನ್ನು ಸೃಷ್ಟಿಸಿದ್ದಾರೆ. ಪರಂಪರೆ ಮತ್ತು ಆಧುನಿಕತೆಯ ಮಧ್ಯೆ ಯಾವತ್ತೂ ಸಂಘರ್ಷ ಇದ್ದೇ ಇದೆ ಎಂದು ತೋರಿಸಿದ್ದಾರೆ.

ಶ್ರೀ ಚಂದ್ರನಾಥ ಆಚಾರ್ಯ ಅವರು ಮಾಧ್ಯಮ ಕ್ರಮಗಳು ಹಾಗೂ ಶೈಲಿಗಳೂ ಹೊಸ ಪ್ರಯೋಗಗಳನ್ನು ಮಾಡಿದರು. ಇವರ ಆಯ್ಕೆ ಮಾಡಿಕೊಂಡ ಪ್ರತಿ ವ್ಯಕ್ತಿ, ವಸ್ತು, ಪರಿಕಲ್ಪನೆ, ಸಮಕಾಲೀನ ವಿದ್ಯಮಾನಗಳೆಲ್ಲವೂ ಇವರ ಚಿತ್ರಗಳಲ್ಲಿ ಸ್ಥಾನ ಪಡೆದಿವೆ. ಇದಕ್ಕೆ ಇವರ ನಿರಂತರ ಶ್ರಮ, ಚಿಂತನೆ, ಅಪಾರ ಮತ್ತು ಆಳವಾದ ಓದು, ಗ್ರಹಿಕೆ ಮತ್ತು ಸೃಜನಶೀಲ ಮನಸ್ಥಿತಿಯಂಥ ಗುಣಗಳು ಮುಖ್ಯ ಕಾರಣವಾಗಿವೆ. ಆಚಾರ್ಯರು ತಮ್ಮದೇ ಆದ ಸ್ವಂತ ಶೈಲಿಯನ್ನು ಸ್ಥಾಪಿಸುವಷ್ಟರಮಟ್ಟಿಗೆ ಬೆಳೆದು ನಿಂತರು. ಚಂದ್ರನಾಥ ಆಚಾರ್ಯ ಅವರು ಚರಿತ್ರೆ–ಪುರಾಣ–ಪರಂಪರೆಯೊಂದಿಗೆ ಸ್ಥಾಪಿಸಿಕೊಂಡ ಸಂಬಂಧ ವಿಶ್ವಾಸದ್ದು, ಇಂಥ ಗೌರವ, ವಿಶ್ವಾಸ ಇರುವ ಕಾರಣಕ್ಕಾಗಿಯೆ ಇವರು ರಚಿಸಿರುವ ಅಸಂಖ್ಯಾತ ತೈಲವರ್ಣಚಿತ್ರಗಳು, ಸಾಂದರ್ಭಿಕ ಚಿತ್ರ ರಚನೆಗಳು, ಜಲವರ್ಣಚಿತ್ರಗಳೆಲ್ಲವೂ ನಮ್ಮ ಮಧ್ಯೆ ಓಡಾಡುವ ಜೀವಂತ ಪುತ್ಥಳಿಗಳಂತೆ ಕಾಣುತ್ತವೆ. ಇವರು ರಚಿಸಿರುವ ನೂರಾರು ಸಾಂಪ್ರದಾಯಿಕ ರಚನೆಗಳಲ್ಲಿ ಚಲನೆ ಇದೆ. ಪುರಾಣದ ಸೃಷ್ಟಿಗಳಾದ ರಾಮ, ರಾವಣ, ಶ್ರೀ ಕೃಷ್ಣ ಅಷ್ಟೇ ಅಲ್ಲದೆ ನಿಸರ್ಗ, ಮರ, ನದಿ ಕಾಡು, ಹೂವು, ಗಿಡ–ಬಳ್ಳಿ ಎಲ್ಲವು ಚಲನೆ ಪಡೆದಿವೆ. ಈ ಚಿತ್ರಗಳಲ್ಲಿರುವ ಜೀವಂತಿಕೆ ಸುಮ್ಮನೆ ಬಂದದ್ದಲ್ಲ ಕಲಾವಿದನ ಸಂವೇದನೆ ಪ್ರತಿ ರಚನೆಯೊಂದಿಗೆ ಮಾಡುವ ಸಂವಾದ ಇದನ್ನು ಸಾಧ್ಯಗೊಳಿಸಿದೆ.

ಆಚಾರ್ಯರು ಹೆಚ್ಚಾಗಿ ಪ್ರಾಣಿರೂಪಗಳನ್ನು ತಮ್ಮ ಪೇಂಟಿಂಗಳಿಗೆ ಬಳಸುತ್ತಿದ್ದು ಅವುಗಳು ಮಾನವನ ಭಾವನೆಗಳಾದ ತಲ್ಲಣ, ತಳಮಳ, ಕುತೂಹಲ, ರಾಗ ದ್ವೇಷಗಳನ್ನು ಸಮರ್ಥವಾಗಿ ಚಿತ್ರಿಸಲು ಇವು ಸಂಕೇತಗಳಾಗಿವೆ. ಮನುಷ್ಯನ ಸಂಕೀರ್ಣ ಮನಸ್ಥಿತಿಯನ್ನು ತೀವ್ರವಾಗಿ ಕಾಡುವ ದಾಹ, ಕುದಿಯುತ್ತಿರುವ ತಲ್ಲಣದ ಪರಿಸ್ಥಿತಿಗಳನ್ನು ಚಿತ್ರಗಳ ಮೂಲಕ ಸಮರ್ಥವಾಗಿ ಅಭಿವ್ಯಕ್ತಿಸಬಲ್ಲುದು ಆಚಾರ್ಯರ ಫ್ಯಾಂಟಸಿ, ವಾಸ್ತವಿಕತೆ, ಕನಸು, ಕರುಣೆ ಮತ್ತು ಅಪೇಕ್ಷೆಯಂಥ ಸಂಗತಿಗಳನ್ನು ಮೇಲ್ನೋಟಕ್ಕೆ ಅಸಂಗತ ಎನಿಸುವ ಹಲವು ಒಳನೋಟಗಳನ್ನು ಒಳಗೊಂಡ ಚಿತ್ರಗಳನ್ನು ಸೃಷ್ಟಿಸಿದ್ದು ಇವರ ಮುಖ್ಯ ಸಾಧನೆ.

ವಿಜ್ಞಾನ ಮತ್ತು ತಂತ್ರಜ್ಞಾನ ಇಂದು ಹಲವು ಸವಲತ್ತುಗಳನ್ನು ಕೊಡುತ್ತಾ ಬಂದಿದೆ. ತಂತ್ರಜ್ಞಾನದ ಮಾಹಿತಿ ಮತ್ತು ವಿವರಗಳನ್ನು ಬಲ್ಲ ವ್ಯಕ್ತಿ ತಾನು ಬಯಸುವ ಸಂಗತಿಗಳನ್ನು ಅಂತರ್ಜಾಲದಿಂದ ಸಲೀಸಾಗಿ ಪಡೆಯಬಲ್ಲಂಥ ವಾತಾವರಣ ನಮ್ಮೆದುರು ಇದೆ. ಬಿಡಿ ಬಿಡಿ ವಿವರಗಳನ್ನು ಜೋಡಿಸಿ ಅದಕ್ಕೊಂದು ಬೇಕಾದ ಆಕೃತಿ, ಆಕಾರವನ್ನು ನೀಡಿ ಅದರ ಮೂಲಗುಣ ಇಲ್ಲವೆ ಅಸಲಿ ರೂಪವನ್ನೆ ಮರೆಮಾಚಬಲ್ಲ ಚಾಣಾಕ್ಷತನ ಈ ಬಗೆಯ ಕೈ ಚಳಕವನ್ನು ಬುದ್ಧಿವಂತಿಕೆ ಎಂದು ಕರೆಯಬಹುದಾದರು, ಸೃಜನಶೀಲ ಕಲಾಕೃತಿಗಳನ್ನು ಸೃಷ್ಟಿಸಿದ್ದಾರೆ. ಹೀಗೆ ಚಂದ್ರನಾಥ ಆಚಾರ್ಯರು ಸರ್ರಿಯಲಿಸಂ ಪಂಥದ ಅಂಶಗಳನ್ನು ತಮ್ಮ ಕಲಾಕೃತಿಗಳಲ್ಲಿ ಮುಂದುವರೆಸುತ್ತಿದ್ದಾರೆ.

## ಸಿ. ಚಂದ್ರಶೇಖರ

ಸಿ. ಚಂದ್ರಶೇಖರ್ ಅವರು ೧೧ನೇ ಮಾರ್ಚ್ ೧೯೪೮ರಂದು ಬೆಂಗಳೂರಿನ ಗೋಪಾಲಪುರದ ಗ್ರಾಮೀಣ ಪ್ರದೇಶದಲ್ಲಿ ಜನಿಸಿದರು. ಚಿಕ್ಕಯಲ್ಲಪ್ಪ ಹಾಗೂ ಚೌಡಮ್ಮಾ ಇವರ ತಂದೆ ತಾಯಿ. ಸಿ.ಚಂದ್ರಶೇಖರ ಅವರು ಚಿಕ್ಕಂದಿನಿಂದಲೇ ಕೆರೆಯ ಮಣ್ಣನ್ನು ತಂದು ಸಣ್ಣ ಸಣ್ಣ ಮೂರ್ತಿಗಳನ್ನು ಮಾಡುತ್ತಿದ್ದರು. ತಮ್ಮ ಅಂಗಡಿಯ ಪಕ್ಕದಲ್ಲಿನ ದೇವಾಲಯದ ಅಂಗಳದಲ್ಲಿ ಸಿಮೆಂಟ್ ಗಾರೆಯ ಆಂಜನೇಯ, ಈಶ್ವರ, ಗಣಪತಿ ಮುಂತಾದ ಚಿತ್ರಗಳನ್ನು ರಚಿಸುತ್ತಿದ್ದರು. ಹೀಗೆ ಬಾಲ್ಯದಿಂದಲೇ ಕಲೆ ಅವರಲ್ಲಿ ಅರಳತೊಡಗಿತು. ಶಾಲಾ ಹಂತದಲ್ಲೆ ಚಿತ್ರಕಲೆಯಲ್ಲಿ ಅನೇಕ ಚಿತ್ರಕಲಾ ಸ್ಪರ್ಧೆಗಳಲ್ಲಿ ಭಾಗವಹಿಸುತ್ತಾರೆ. ೧೯೬೪ರಲ್ಲಿ ಬೆಂಗಳೂರಿನಲ್ಲಿ ಆರ್.ಎಂ.ಹಡಪದ್ ಅವರು ಆರಂಭಿಸಿದ ಕೆನ್ ಕಲಾಶಾಲೆಯಲ್ಲಿ ಸಿ.ಚಂದ್ರಶೇಖರ ಅವರು ಎಂ.ಎಂ.ಜಿಡಿ ಆರ್ಟ್ ಡಿಪ್ಲೊಮಾ ಪದವಿಯನ್ನು ೧೯೭೩ರಲ್ಲಿ ಪಡೆದುಕೊಂಡರು. "ನಾಡಿನ ಪ್ರತಿಭೆಗಳನ್ನು ಗುರುತಿಸಿ ಸಾಕಿ ಸಲಹುವ ಕೆಲಸ ಮಾಡಿದ ದಿವಂಗತ ಹಡಪದರ ಗರಡಿಯಲ್ಲಿ ಬೆಳೆದ ಚಂದ್ರಶೇಖರ ನಿರಂತರ ಹೊಸದನ್ನು ಕಲಿಯುತ್ತಾ ಬಂದ ಕಲಾವಿದರು ಮುಂದೆ ಪ್ರಸಿದ್ಧ ಕಲಾವಿದರಾದ ಕೆ.ಕೆ.ಹೆಬ್ಬಾರರು ಕರ್ನಾಟಕ ಲಲಿತಕಲಾ ಅಕಾಡೆಮಿಗೆ ಅಧ್ಯಕ್ಷರಾಗಿ ಬಂದ ಮೇಲೆ ನಮ್ಮ ಕಲಾವಿದರು ಹೊರಗೆ ಹೋಗಿ ಕಲಿತು ಬರಬೇಕು ಎಂಬ ಅವರ ಮಾತಿನ ಮೇರೆಗೆ ಚಂದ್ರಶೇಖರ ಅವರು ಗ್ರಾಫಿಕ್ ಕಲೆಯಲ್ಲಿ ಉನ್ನತ ಕಲಾಶಿಕ್ಷಣ ಪಡೆಯಲು ಶಾಂತಿನಿಕೇತನಕ್ಕೆ ಹೋದರು ಹೊರಗಡೆ ಹೋಗಿ ಕಲಿತು ಬಂದರೆ ಹೊಸ ಚಿಂತನೆಗಳು ಸಾಧ್ಯ ಎಂಬ ನಂಬಿಕೆಯಿಂದಲೇ ಅವರು ಈ ವ್ಯಾಸಂಗವನ್ನು ಕೈಗೊಂಡರು ೧೯೭೮-೮೦ರಲ್ಲಿ ಪೋಸ್ಟ್-ಡಿಪ್ಲೊಮಾ ಮುಗಿಸಿದರು. ಹೊಸ ತಂತ್ರಗಳನ್ನು ಚಿತ್ರಕಲೆಯಲ್ಲಿ ಅಳವಡಿಸಿಕೊಂಡರು.

೧೯೭೪ರಲ್ಲಿ ಬೆಂಗಳೂರಿನ ಕಾರ್ಪೊರೇಶನ್ ಹೈಸ್ಕೂಲ್‌ನಲ್ಲಿ ಚಿತ್ರಕಲಾ ಶಿಕ್ಷಕರಾಗಿದ್ದಾಗಲೇ ಶಾಂತಿನಿಕೇತನಕ್ಕೆ ಹೋಗಿ ಹಿಂತಿರುಗಿ ಮತ್ತೆ ೧೯೮೦ರಲ್ಲಿ ಪುನಃ ಶಿಕ್ಷಕ ವೃತ್ತಿಯನ್ನು ಮುಂದುವರೆಸಿದರು. ಆದರೆ ತುಂಬಾ ದಿನಗಳು ಈ ವೃತ್ತಿ ಮುಂದುವರೆಯಲಿಲ್ಲ. ೧೯೮೩ರಲ್ಲಿ ಶಿಕ್ಷಕ ವೃತ್ತಿಗೆ ರಾಜಿನಾಮೆ ನೀಡಿ ಗ್ರಾಫೀಕ್ಸ್, ಡ್ರಾಯಿಂಗ್ಸ್, ಪೆಯಿಂಟಿಂಗ್ಸ್, ವಿವಿಧ, ಕಾಲೇಜುಗಳಲ್ಲಿ ಉಪನ್ಯಾಸ, ಕಲಾಯಾತ್ರೆ, ಕ್ಯಾಂಪ್ ಮುಂತಾಗಿ ಸಂಪೂರ್ಣವಾಗಿ ತಮ್ಮನ್ನು ತೊಡಗಿಸಿಕೊಂಡರು. ಸಿ.ಚಂದ್ರಶೇಖರ ಅವರು ಕಲಾ ಸಂಘಟಕರಾಗಿಯೂ ೧೯೮೩ರಲ್ಲಿ ನಡೆಸಿದ ಕಲಾಯಾತ್ರೆ ಕರ್ನಾಟಕದಲ್ಲಿ ಒಂದು ಕಲಾ ಆಂಧೋಲನದ ಹದಿನಾರು ಜನ ಕಲಾವಿದರ ಜೊತೆಗೂಡಿ ಮಾಡಿದ ಈ ಯಾತ್ರೆ ಚಿತ್ರದಲ್ಲಿ ಬೆಳೆಯಲು ವ್ಯಾಪಕ ಪ್ರೋತ್ಸಾಹ ನೀಡಿದೆ ಎಂದು ಹೇಳಬಹುದು. ಅವರು ೧೯೯೫ರಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿಗೆ ಅಧ್ಯಕ್ಷರಾದರೂ ಸಹ ಹೀಗೆ ಅವರ ಕಲಾ ಬದುಕು ಸಾಗುತ್ತದೆ.

ಸಿ.ಚಂದ್ರಶೇಖರ ಅವರ ಚಿತ್ರಗಳಲ್ಲಿ ವಾಸ್ತವತೆಯ ಕಾಳಜಿ ಅಪಾರವಾಗಿರುತ್ತದೆ. ಆದರೆ ಅವರು ಆ ವಾಸ್ತವವನ್ನು ಹಾಗೆ ಬಿಡದೆ ಆ ವಾಸ್ತವವನ್ನೇ ಸೃಜನಗೊಳಿಸುತ್ತದೆ. ಸಾಮಾಜಿಕ ಚಿಂತನೆಯು ಸರ್ವಕಾಲಕ್ಕೂ ಅನ್ವಯವಾಗುವ ಸತ್ಯಗಳನ್ನು ಅವರ ಈ ಚಿತ್ರಗಳು ಒಳಗೊಳ್ಳುತ್ತವೆ.
ಅಂತರಾಷ್ಟ್ರೀಯ ಪ್ರತಿಷ್ಟಿತ ಕಲಾಪ್ರದರ್ಶನಗಳಾದ ಕ್ಯೂಬಾದ ಹವಾನ ಬೆನಾಲೆಯ ಕಲಾಪ್ರದರ್ಶನ, ಭೂಪಾಲದ ಅಂತರಾಷ್ಟ್ರೀಯ ಪ್ರಥಮ ಗ್ರಾಫಿಕ್ ಬೆನಾಲೆ, ಕೇಂದ್ರ ಲಲಿಕಲಾ ಅಕಾಡೆಮಿಯ ವಾರ್ಷಿಕ ಪ್ರದರ್ಶನದಲ್ಲಿ ಅನೇಕ ಬಾರಿ ಇವರ ಕಲಾಕೃತಿಗಳು ಪ್ರದರ್ಶನಗೊಂಡಿವೆ. ಸಾಮೂಹಿಕ ಪ್ರದರ್ಶನಗಳನ್ನು ನೀಡಿರುವುದಲ್ಲದೆ ಕರ್ನಾಟಕ ಕಲಾಮೇಳದ ಸಂಸ್ಥಾಪಕರಾಗಿ, ಕರ್ನಾಟಕ ಕಲಾಯಾತ್ರೆಯ ಸಂಚಾಲಕರಾಗಿ ನಾಡಿನ ಉದ್ಧಗಲಕ್ಕೂ ಕಲಾಪ್ರದರ್ಶನಗಳನ್ನು ಕೊಂಡಯ್ದ ಪ್ರಮುಖರಲ್ಲಿ ಒಬ್ಬರಾಗಿದ್ದಾರೆ.

ಇವರು ಕಲಾಕೃತಿಗಳಲ್ಲಿ ಹಲವಾರು ಬಗೆಯ ಪ್ರಯೋಗಗಳು ಮಾಡಿದ್ದಾರೆ. ಈ ಅಧ್ಯಯನದಲ್ಲಿ ಸರ್ರಿಯಲಿಸಂ ಪಂಥದ ಅಂಶಗಳ ಕಾಣಿಸುವಂತ ಕಲಾಕೃತಿಗಳನ್ನು ಮತ್ತು ಗ್ರಾಫೀಕ್ಸ್ ಕಲಾಕೃತಿಗಳಲ್ಲಿ ಸಹ ಸರ್ರಯಲಿಸಂ ಪಂಥದಲ್ಲಿ ಕೂಂಚವಾಗಿ ಕಾಣಬಹುದು. ಮತ್ತೆ ಅವರ ವರ್ಣಚಿತ್ರಗಳಲ್ಲಿ ಒಂದು ಕಾಲಗಟ್ಟದಲ್ಲಿ ಸರ್ರಿಯಲಿಸಂ ಅಂಶಗಳನ್ನು ಅಳವಡಿಸಿಕೊಂಡಿದ್ದು ಕಂಡುಬರುತ್ತವೆ. ಅವರೇ ಹೇಳುವ ಹಾಗೇ ಸರ್ರಿಯಲಿಸಂ ಪ್ರಭಾವ ಅವರ ಮೇಲೆ ಸ್ವಲ್ಪ ಮಟ್ಟಿಗೆ ಆಗಿತ್ತು ಎಂದಿದ್ದಾರೆ.
ಪ್ರೇರಣೆ ಆಗುತ್ತಾ ಇರುತ್ತೆ ಮನುಷ್ಯ, ಆಗಿರಬಹುದುದು ಗಿಡ, ಕಲ್ಲು ಅಥವಾ ಪೇಂಟಿಂಗ್ ಆಗಬಹುದು ಏನಾದರೂ ಆಗಬಹುದು ಯಾವುದು ನಿನ್ನ ಮನಸ್ಥಿಗೆ ಇಷ್ಟ ಆಗುತ್ತೊ ಅವಾಗ ಅದು ಕಲಾಕೃತಿ ರಚಿಸಬೇಕು ಎನ್ನುವ ಪ್ರೇರಣೆ ಸಿಗುವುದು ಆ ಮಾದರಿಯನ್ನು ಇಟ್ಟುಕೊಂಡು ಕಲಾಕೃತಿಗಳನ್ನು ರಚಿಸುವುದರ ಮೂಲಕ ನಿಮ್ಮದೆ ಆದ ಆಕಾರ ಹುಟ್ಟುತ್ತೆ ಎಂದು ಕಲಾವಿದರು ಸ್ವತಃ ಹೇಳುತ್ತಾರೆ.

ಆದರೆ ಸೋಮನಾಥ ಕೃತಿಗಳ ಬಗ್ಗೆ ಹೇಳುವಾಗ ಅವರ ಕೃತಿಗಳು ಬಿಡಿಸಿ ಏನು ಹೇಳೊಕೆ ಆಗಲ್ಲಾ ಆದರೆ ಕೆಲವೊಂದು ನೋವುಗಳನ್ನು ಹೇಳತಾಯಿದೆ ಎನಿಸಲು ಶುರುವಾಗುತ್ತದೆ. ಆದರೆ ನೋವುಗಳು ಯಾವಗಲೂ ಅಪೇಕ್ಷೆ ಪಡೋದು ಸುಖಾನಾ ಆ ಸುಖಾ ಎಲ್ಲಿ ಸಿಗುತ್ತೆ ಅಂದರೇ ನೋವು, ಭಾವನೆಗಳು ಈ ಭಾವನೆಗಳನ್ನು ಅಭಿವ್ಯಕ್ತಗೊಳಿಸುವುದು ಕ್ಯಾನ್ವಾಸ್, ಪೇಂಟಿಂಗ್, ಗ್ರಾಫೀಕ್ಸ್, ಇಲ್ಲಿಗೆ ಆತ್ಮ ಸಂತೋಷ ಪಡೆದು ಯಾರು ನಮ್ಮಲ್ಲೆ ಯಾವುದೇ ಕಾರಣಕ್ಕೂ ಹೀಗೆ ಮಾಡಬೇಕು ಅನ್ನೋದು ಇರಬಾರದು. ಅಭಿರುಚಿ ಇರೊದನ್ನ ನೆನಸಿಕೊಂಡರೆ ಬಾಯಿಯಲ್ಲಿ ನೀರು ಬರೋದು ಅಭಿರುಚಿ ಇರೋದನ್ನು ತಂದು ಮುಂದೆ ಇಟ್ಟು ನೋಡೊಕೂ ಹೋಗಲ್ಲಾ ಈ ಮನಸ್ಸು ಹಾಗೆ ಸಿದ್ದಗೊಂಡಿರುತ್ತದೆ. ಆದ್ದರಿಂದ "ದಿ ಪೇಟಿಂಗ್ ಇಸ್ ಮೇಡಿಟೇಷನ್" ಎಂದು ಹೇಳುತ್ತಾರೆ.

## ಸರ್ರಿಯಲಿಸಂ ಕುರಿತು ಸಿ.ಚಂದ್ರಶೇಖರ ಅವರ ಅನಿಸಿಕೆ

ಸೆರ್ರಿಯಲಿಸ್ಟಿಕ್ ಅನ್ನೋದು ಹೇಗೆ ಇರುತ್ತದೆ ಎಂದರೆ ರೀಯಲಿಸ್ಟಿಕ್‌ನಿಂದ ಹೋಗಿ ಅದು ಭಿನ್ನತೆಯನ್ನು ಪಡೆದುಕೊಳ್ಳುತ್ತಾ ಹೋಗುತ್ತದೆ. ಗಣೇಶ ಅದು ಒಂದು ಸರ್ರಿಯಲಿಸ್ಟಿಕಲ್ ಫಾರ್ಮ್ ಪಂಥವು ಎಷ್ಟೂ ನಮ್ಮ ಸರ್ರಿಯಲಿಸ್ಟಿಕಲ್ ಫಾರ್ಮ್‌ಗಳು ಮೋದಲೆ ಹುಟ್ಟಿದ್ದು ಅವುಗಳಿಗೆ ಯಾರು ಸೂಕ್ತ ಹೆಸರು ನೀಡಲಿಲ್ಲ. ಆದರೆ ಡಾಲಿ ಪೇಟಿಂಗ್ ಮಾಡಿದ ತಕ್ಷಣ ಅದಕ್ಕೆ ಸರ್ರಿಯಲಿಸ್ಟಿಕಲ್‌ನಲ್ಲಿ ಇದೆ ಎಂದು ಉಚ್ಚರಿಸದ ಮೇಲೆ ನಾವೆಲ್ಲರೂ ಅದನ್ನು ಚಲಾವಣೆಯಲಿಟ್ಟುಕೊಂಡಿದ್ದೇವೆ. ಆದರೆ ಹಾಗೆಲ್ಲಾ ಆ ರೀತಿ ಮಾಡಬಾರದು ಎಂಥಲೂ ಇಲ್ಲ, ಕೆಲವು ಪ್ರಭಾವ ಇರುತ್ತವೆ, ಅದಕ್ಕೆ ನಮ್ಮದಾಗಿಸಿಕೊಳ್ಳಬೇಕು ಎಂದು ಹೇಳುತ್ತಾರೆ.

ಸಿ.ಚಂದ್ರಶೇಖರ ಅವರು ಆ್ಯಪಲ್ ಸರಣಿ ಚಿತ್ರಗಳು, ಫಿಯರ್ ಸರಣೀಯ ಚಿತ್ರಗಳು, ಮೊಟ್ಟೆ ಸರಣೀಯ ಚಿತ್ರಗಳು, ಸ್ಟಿಲ್ ಮತ್ತು ಲೈಫ್ ಸರಣೀಯ ಚಿತ್ರಗಳು, ಸ್ವಿಚ್ ಸೂಜಿಯ ಸರಣೀಯ ಚಿತ್ರಗಳು ಕಾಣಿಸುತ್ತವೆ. ಹೀಗೆ ಕಲಾಕೃತಿ ರಚನೆಗಳಲ್ಲಿ ನಾವು ಹಲವಾರು ಕಲಾಕೃತಿಗಳಲ್ಲಿ ಸರ್ರಯಲಿಸಂ ಪಂಥದ ಅಂಶಗಳನ್ನು ಕಾಣಬಹುದುದಾಗಿದೆ. ಅವುಗಳಲ್ಲಿ ಕೆಲವು ಪರಿಚಯಿಸಲಾಗಿದೆ.

### ಬಾಬು ಈಶ್ವರ್ ಪ್ರಸಾದ್

ಬಾಬು ಈಶ್ವರ್ ಪ್ರಸಾದ್ ಅವರು ೧೯೬೮ರಲ್ಲಿ ಕರ್ನಾಟಕದಲ್ಲಿ ಜನಿಸಿದರು. ೧೯೮೯ರಲ್ಲಿ ಬೆಂಗಳೂರಿನ ಚಿತ್ರಕಲಾ ಪರಿಷತ್ತಿನಲ್ಲಿ ಪದವಿಯನ್ನು ಪಡೆದುಕೊಂಡರು. ನಂತರ ೧೯೯೨ರಲ್ಲಿ ಬರೋಡಾದ (ವಡೋದರ) ಎಂ.ಎಸ್.ವಿಶ್ವವಿದ್ಯಾಲಯದಿಂದ ಮುದ್ರಣ ಮಾಧ್ಯಮದಲ್ಲಿ ಸ್ನಾತಕೋತ್ತರ ಪದವಿ ಪಡೆದರು. ಇವರು ತಮ್ಮದೆ ಆದ ಶೈಲಿಯೊಂದನ್ನು ಸೃಷ್ಟಿಸಿಕೊಂಡು ಕಲಾಕೃತಿಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ಸರ್ರಿಯಲಿಸಂ ಅಂಶಗಳನ್ನು ಕಾಣಬಹುದಾಗಿದೆ. ಇವರ ಕಲಾಕೃತಿಗಳು ವಿಭಿನ್ನ ರೀತಿಯಲ್ಲಿ ಕಾಣಬಹುದಾಗಿದೆ. ಇವರು ಹೆಚ್ಚಾಗಿ ಅಕ್ರಾಲಿಕ ಮಾಧ್ಯಮ ಮತ್ತು ಗ್ರಾಫಿಕ್ ಮಾಧ್ಯಮದಲ್ಲಿ ಚಿತ್ರಗಳನ್ನು ರಚಿಸಿದ್ದಾರೆ. ಇವರ ಸರ್ರಿಯಲಿಸಂ ಅಂಶಗಳುಳ್ಳ ಕಲಾಕೃತಿಗಳಲ್ಲಿ ಬಣ್ಣಗಳ ಬಳಕೆ ಪ್ಲೇನ್ ಆಗಿ ಬಳಸಲಾಗಿದೆ. ಇವರು ಇಂದಿನ ಯುಗದ ಕಲಾವಿದರಲ್ಲಿ ಪ್ರಮುಖ ಕಲಾವಿದರಾಗಿ ಬೆಳೆದಿದ್ದಾರೆ. ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಮಟ್ಟದಲ್ಲಿ ಕಲಾ ಪ್ರದರ್ಶನಗಳನ್ನು ಮಾಡುವುದರ ಜೊತೆಗೆ ಬೆಂಗಳೂರಿನ ಕಲಾ ಜಗತ್ತಿನಲ್ಲಿ ದೊಡ್ಡ ಹೆಸರು ಮಾಡಿದ್ದಾರೆ ಹೇಳಿದರೆ ತಪ್ಪಾಗಲಾರದು.

ಇವರ ಕಲಾ ಸೇವೆಗೆ ಅನೇಕ ಪ್ರಶಸ್ತಿ ಮತ್ತು ಪುರಸ್ಕಾರಗಳು ಸಂದಿವೆ. ಇವುಗಳಲ್ಲಿ ಕೆಲವು ಇಲ್ಲಿ ಹೇಳಲಾಗಿದೆ. ಮಾನವ ಸಂಪನ್ಮೂಲ ಮತ್ತು ಅಭಿವೃದ್ಧಿ ಸಚಿವಾಲಯದವರು ನೀಡುವ ರಾಷ್ಟ್ರೀಯ ವಿದ್ಯಾರ್ಥಿ ವೇತನವನ್ನು ೧೯೮೯-೯೧ರಲ್ಲಿ ಬಾಬು ಈಶ್ವರ್ ಪ್ರಸಾದ್ ಅವರು ಪಡೆದುಕೊಂಡಿದ್ದಾರೆ. ಇವರು ಪ್ರಖ್ಯಾತ ಕಲಾವಿದರಾದ ಕೆ. ಲಕ್ಷ್ಮಣಗೌಡ ಅವರ ಮೇಲ್ವಿಚಾರಣೆಯಲ್ಲಿ ಕೆಲಸ ಮಾಡಿದರು. ೨೦೦೧ರಲ್ಲಿ ಬರೋಡಾದಲ್ಲಿದ್ದಾಗ ರಾಡ್‌ಸೋರ್ ಗೌರವಗಳು ಮತ್ತು ಪ್ರಶಸ್ತಿಗಳನ್ನು

ಪಡೆದುಕೊಂಡರು. ಹಾಗೂ ಎಚ್.ಕೆ. ಕೆಜ್ರಿವಾಲ್ ಯಂಗ್ ಆರ್ಟಿಸ್ಟ್ ಪ್ರಶಸ್ತಿಯನ್ನು ತಮ್ಮ ಮುಡಿಗೇರಿಸಿಕೊಂಡರು. ಹೀಗೆ ಹಲವಾರು ಪ್ರಶಸ್ತಿ ಪಡೆಯುವುದರ ಜೊತೆಗೆ ಅನೇಕ ಕಲಾ ಪ್ರದರ್ಶನಗಳನ್ನು ಮಾಡಿದ್ದಾರೆ. ಇವರು ಸಹ ಕರ್ನಾಟಕದಲ್ಲಿ ಸರ್ರಿಯಲಿಸಂ ಪಂಥವನ್ನು ಪರಿಚಯಿಸುವಲ್ಲಿ ಒಬ್ಬರಾಗಿದ್ದಾರೆ ಎಂದು ಹೇಳಬಹುದು.

### ಗುರುಸಿದ್ದಪ್ಪ

ಗುರುಸಿದ್ದಪ್ಪನವರು ೧೯೭೬ರಲ್ಲಿ ಚಿತ್ರದುರ್ಗದಲ್ಲಿ ಜನಿಸಿದರು. ಇವರಿಗೆ ಬಾಲ್ಯದಿಂದಲೇ ಚಿತ್ರಕಲೆಯಲ್ಲಿ ಆಸಕ್ತಿ ಇದ್ದ ಕಾರಣ ಚಿತ್ರಕಲಾ ಶಿಕ್ಷಣ ಪಡೆಯಲು ಮುಂದಾದರು. ಇವರು ೧೯೯೭ರಲ್ಲಿ ಬೆಂಗಳೂರಿನ ಚಿತ್ರಕಲಾ ಪರಿಷತ್ತಿನಲ್ಲಿ ತಮ್ಮ ಪದವಿಯನ್ನು ಪಡೆದುಕೊಂಡರು. ಮುಂದೆ ಇವರು ಹೆಚ್ಚಿನ ಅಧ್ಯಯನಕ್ಕೆ ಬೇರೆ ರಾಜ್ಯಕ್ಕೆ ಹೋಗಬೇಕು ಎಂದು ನಿರ್ಧಾರಮಾಡಿ, ಗುಜರಾತಿನ ಬರೋಡಾ(ವಡೋದರ)ಗೆ ತೆರಳಿದರು. ೨೦೦೦ದಲ್ಲಿ ಬರೋಡಾದ ಎಂ.ಎಸ್. ವಿಶ್ವವಿದ್ಯಾಲಯದಿಂದ ಸ್ನಾತಕೋತ್ತರ ಪದವಿಯನ್ನು ಪಡೆದುಕೊಂಡರು. ಇವರು ಸರ್ರಿಯಲಿಸಂ ಪಂಥದ ಅಂಶಗಳನ್ನು ಕಾಣಿಸುವ ಕಲಾಕೃತಿಗಳನ್ನು ಸೃಷ್ಟಿಸುವಲ್ಲಿ ಹೊಸ ತರಹದ ಅಲೆಯನ್ನೇ ಎಬ್ಬಿಸಿದರು ಎಂದು ಹೇಳಬಹುದು. ಇವರು ಅಕ್ರಾಲಿಕ್ ಮತ್ತು ತೈಲ ಮಾಧ್ಯಮದಲ್ಲಿ ಕಲಾಕೃತಿಗಳನ್ನು ರಚಿಸುತ್ತಾರೆ. ಇವರ ಕಲಾಕೃತಿ ನೋಡುಗರಿಗೆ ಒಂದು ವಿಶಿಷ್ಟ ಕಲ್ಪನಾಲೋಕಕ್ಕೆ ಕರೆದೊಯ್ಯುವ ಶಕ್ತಿ ಹೊಂದಿವೆ. ಇವರು ತಮ್ಮ ಸಾಮಾಜಿಕ ಕಳಕಳಿ ಮತ್ತು ಪರಿಸರ, ಪ್ರಾಣಿಗಳ ಚಿತ್ರಗಳನ್ನು ತಮ್ಮದೇ ಆದ ವಿಭಿನ್ನ ಶೈಲಿಯಲ್ಲಿ ರಚಿಸಿದ್ದಾರೆ. ಮಾನವನ ಮತ್ತು ಪ್ರಾಣಿಗಳ ನಡುವಿನ ಅಂತರ್ ಸಂಬಂಧವನ್ನು ತಮ್ಮದೇ ವಿಶಿಷ್ಟ ಶೈಲಿಯಲ್ಲಿ ಅಭಿವ್ಯಕ್ತಿಸಿದ್ದಾರೆ. ಅನೇಕ ಕಲಾ ಪ್ರದರ್ಶನಗಳನ್ನು ಮಾಡುವುದರ ಮೂಲಕ ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಮಟ್ಟದಲ್ಲಿ ಇವರು ಹೆಸರು ಮಾಡಿದ್ದಾರೆ. ೨೦೦೭ರಲ್ಲಿ ಏಕವ್ಯಕ್ತಿ ಕಲಾ ಪ್ರದರ್ಶನವನ್ನು ಬೆಂಗಳೂರಿನಲ್ಲಿ ಮಾಡಿದರು. ಸಾಕ್ಷಿ ಆರ್ಟ್ ಗ್ಯಾಲರಿ ಮುಂಬೈನಲ್ಲಿ ಮತ್ತು ೨೦೦೫ ಮತ್ತು ೨೦೦೭ರಲ್ಲಿ ಕಲಾ ಪ್ರದರ್ಶನವನ್ನು ಕೈಗೊಂಡಿದ್ದಾರೆ. ಇವರಿಗೆ ಅನೇಕ ಪ್ರಶಸ್ತಿಗಳೂ ಸಹ ಲಭಿಸಿವೆ. ೨೦೦೩ರಲ್ಲಿ ಕ್ಯಾಮಲಿನ್ ಫೌಂಡೇಷನ್ ಪ್ರಶಸ್ತಿ ಇವರಿಗೆ ಲಭಿಸಿದೆ. ೨೦೦೪ರಲ್ಲಿ ದೆಹಲಿಯ ಲಲಿತಕಲಾ ಅಕಾಡೆಮಿಯವರು ಕೊಡಮಾಡುವ ಪ್ರಶಸ್ತಿಗಳಲ್ಲಿ ಒಂದಾದ ೪೬ನೇ ರಾಷ್ಟ್ರೀಯ ಅಕಾಡೆಮಿ ಪ್ರಶಸ್ತಿ ಇವರಿಗೆ ಲಭಿಸಿದೆ. ಹೀಗೆ ಹಲವಾರು ಪ್ರಶಸ್ತಿ ಸನ್ಮಾನಗಳು ಇವರನ್ನು ಹರಸಿ ಬಂದಿವೆ. ಒಟ್ಟಿನಲ್ಲಿ ಇವರು ನಮ್ಮ ಕರ್ನಾಟಕದ ಪ್ರಮುಖ ಕಲಾವಿದರಲ್ಲಿ ಒಬ್ಬರಾಗಿದ್ದಾರೆ. ಇವರ ಕಲಾಕೃತಿಗಳಲ್ಲಿ ಸರ್ರಿಯಲಿಸಂ ಅಂಶಗಳು ಹೆಚ್ಚಾಗಿ ಕಂಡುಬರುತ್ತವೆ ಎಂದು ಹೇಳಬಹುದು.

## ಚಂದ್ರಹಾಸ್ ವೈ. ಜಾಲಿಹಾಳ

ಚಂದ್ರಹಾಸ ವೈ. ಜಾಲಿಹಾಳ ಅವರು ಸೆಪ್ಟೆಂಬರ್ ೯ರಂದು ೧೯೬೭ರಲ್ಲಿ ರಾಯಚೂರು ಜಿಲ್ಲೆಯ ಸಿಂಧನೂರು ತಾಲೂಕಿನ ಬಳಗಾನೂರು ಎಂಬ ಪುಟ್ಟ ಗ್ರಾಮದಲ್ಲಿ ಅನ್ನಪೂರ್ಣ ಹಾಗೂ ಯಲ್ಲಪ್ಪನವರ ಮಗನಾಗಿ ಜನಿಸಿದರು. ಬಾಲ್ಯದಿಂದಲೂ ಸಾಂಸ್ಕೃತಿಕ ಹಾಗೂ ಕಲಾತ್ಮಕ ಪರಿಸರದಲ್ಲಿ ಬೆಳೆದ ಚಂದ್ರಹಾಸರು ಚಿತ್ರಕಲೆಲ್ಲಿ ಹೆಚ್ಚಿನ ಅಭ್ಯಾಸವನ್ನು ಮಾಡಿ ಸಾಧನೆಯನ್ನು ಮಾಡಲು ಇಚ್ಚಿಸಿದರು. ಅವರ ಆಸಕ್ತಿಯನ್ನು ಕಂಡ ಪಾಲಕರು ಚಿತ್ರಕಲಾ ಶಿಕ್ಷಣ ಕೊಡಿಸಲು ಮುಂದಾದರು. ಅವರು ಒಬ್ಬ ಚಿತ್ರಕಲಾ ಶಿಕ್ಷಕನಾಗಬೇಕೆಂಬ ಆಸೆಯೊಂದಿಗೆ ಚಿತ್ರಕಲಾ ಕ್ಷೇತ್ರಕ್ಕೆ ಬರುತ್ತಾರೆ.

ತಂದೆಯವರ ಸ್ನೇಹಿತರಾದ ಗೋಪಾಲರಾವ್ ಕುಲಕರ್ಣಿಯವರ ಸಲಹೆಯಂತೆ ಕಲಬುರಗಿಯ "ದಿ ಐಡಿಯಲ್ ಫೈನ್ ಆರ್ಟ್" ಕಾಲೇಜಿನಲ್ಲಿ ಎರಡು ವರ್ಷದ ಡಿ.ಎಮ್.ಸಿ ಕೋರ್ಸ್‌ಗೆ ಪ್ರವೇಶ ಪಡೆದುಕೊಂಡರು. ೧೯೮೮ರಲ್ಲಿ ಬಿ.ಎಫ್.ಎ (ಬ್ಯಾಚುಲರ್ ಆಫ್ ಆರ್ಟ್) ಪೇಂಟಿಂಗ್ ಮಾಡುವ ಮೂಲಕ ವಿ.ಜಿ.ಅಂದಾನಿ ಅವರ ಆದೇಶದಂತೆ ಪದವಿ ಶಿಕ್ಷಣಕ್ಕೆ ಹೆಜ್ಜೆ ಇರಿಸಿದ್ದು ಆಕಸ್ಮಿಕವಾಗಿ. ಗುರುಗಳಾದ ಡಾ. ವಿ.ಜಿ.ಅಂದಾನಿ ಹಾಗೂ ದಿವಂಗತ ಶ್ರೀ ಎಂ.ಬಿ.ಲೋಹಾರವರ ಮಾರ್ಗದರ್ಶನದಲ್ಲಿ ಚಿತ್ರಕಲೆಯ ಶಾಸ್ತ್ರಬದ್ಧ ಶಿಕ್ಷಣದ ಜೊತೆಗೆ ಸಮಕಾಲಿನ ಕಲೆ ಅಂದರೆ ನವ್ಯಕಲೆಯ ಬಗ್ಗೆ ಅರಿವನ್ನು ಮೂಡಿಸಿಕೊಂಡರು. ಅಂದಾನಿ ಅವರು ಸಮಕಾಲಿನ ಹಾಗೂ ಅಧುನಿಕ ಕಲೆಯ ಒಳಹೊರಳನ್ನು ತಿಳಿಸುತ್ತಿದ್ದರು. ಇವರಿಂದ ದೊರೆತ ಪ್ರೇರಣೆಯ ಇಂದಿಗೂ ಕಲಾ ಕ್ಷೇತ್ರದಲ್ಲಿರುವಂತೆ ಮಾಡಿದೆ ಎಂದು ಸ್ವತಃ ಹೆಮ್ಮೆಯಿಂದ ಕಲಾವಿದರೆ ಹೇಳಿಕೊಂಡಿದ್ದಾರೆ. ದಿ, ಎಂ.ಬಿ. ಲೋಹಾರ ಅವರು ಚಿತ್ರಕಲೆಯಲ್ಲಿನ ತಂತ್ರಗಾರಿಕೆ, ವರ್ಣಬಳಕೆ, ಸಂಯೋಜನೆ ಮತ್ತು ಕೃತಿಯ ರಚನೆಯಲ್ಲಿರಬೇಕಾದ ಶ್ರದ್ಧೆಯನ್ನು ತುಂಬಿದರು. ಮತ್ತು ಪೂರ್ಣಿಮಾ ಪಾಟೀಲ್ ಹಾಗೂ ರಾಜಶೇಖರ ಪಾಟೀಲ್ ಅವರು ಕೂಡ ಚಂದ್ರಹಾಸರ ಕಲಿಕೆಯಲ್ಲಿ ಮುಖ್ಯ ಪಾತ್ರವನ್ನು ವಹಿಸಿದ್ದರು. ಬಿ.ಎಫ್.ಎ ಪದವಿ ಇದ್ದಾಗಿನಿಂದ ಮುದ್ರಣ ಕಲೆಯ ಕಡೆಗೂ ಇವರ ಒಲವು ಮೂಡಿತು. ಝಿಂಕ್ ಪ್ಲೇಟ್ ಮಾಧ್ಯಮದಿಂದ ಕಲಾಕೃತಿಗಳನ್ನು ರಚಿಸತೊಡಗಿದರು.

ತಾವು ಜನಿಸಿರುವುದೇ ಕಲೆಗಾಗಿ ಎಂಬಂತೆ ಸದಾಕಾಲ ಕೃತಿಗಳ ರಚನೆಯಲ್ಲಿ ತಲ್ಲೀನರಾಗಿ ಜೀವನದ ಸಾರ್ಥಕತೆಯನ್ನು ಕಾಣುತ್ತಿರುವ ಅದ್ಭುತ ಕಲಾವಿದ ಚಂದ್ರಹಾಸ್ ವೈ. ಜಾಲಿಹಾಳ ಅವರು ಚಿತ್ರಕಲೆಯಲ್ಲಿ ಮತ್ತು ಮುದ್ರಣ ಕಲೆಯಲ್ಲಿ ಕರ್ನಾಟಕದ ಪ್ರಮುಖ ಕಲಾವಿದರ ಸಾಲಿನಲ್ಲಿ ಗುರುತಿಸಿಕೊಂಡಿದ್ದಾರೆ. ಇವರು ರೇಖಾಚಿತ್ರಗಳು ರಚನೆ ಮಾಡುವದರಲ್ಲಿಯೂ ಹೆಸರು ಮಾಡಿದ್ದಾರೆ. ಇವರು ಹೆಚ್ಚಾಗಿ ಅಕ್ರಾಲಿಕ್ ಮಾಧ್ಯಮದಿಂದ ಕಲಾಕೃತಿಗಳನ್ನು ರಚಿಸುವರು. ಇವರದೆ ಆದ ಒಂದು ಶೈಲಿಯನ್ನು ಸೃಷ್ಟಿಸಿಕೊಂಡು ಚಿತ್ರವಾಗಲಿ ಮತ್ತು ಮುದ್ರಣ ವಾಗಲಿ ಕಲಾವಲಯದಲ್ಲಿ ಚಿರಪರಿಚಿತರಾಗಿದ್ದಾರೆ. ಹಾಗೇ ಇವರು ಸತತವಾಗಿ ಕಲಾಕೃತಿ ರಚನೆಯಲ್ಲಿ ತೋಡಗಿಕೊಂಡಿದ್ದಾರೆ.

ಹಲವಾರು ಕಲಾಪ್ರದರ್ಶನಗಳಲ್ಲಿ ಭಾಗಿಯಾಗಿದ್ದಾರೆ. ಇವರದೆ ಹಲವಾರು ಶೈಲಿಯಲ್ಲಿ ನಾವು ಸರ್ರಿಯಲಿಸಂ ಪಂಥದ ಕಲಾಕೃತಿಗಳನ್ನು ನೋಡಬಹುದಾಗಿದೆ. ಇವರ ಕಲಾಕೃತಿಗಳು ಮನುಷ್ಯನು ವಾಸಿಸುವ ಮನೆಯನ್ನೆ ಇಟ್ಟುಕೊಂಡು ವಿಭಿನ್ನವಾಗಿ ತೋರಿಸುವ ನಿಟ್ಟಿನಲ್ಲಿ ಕಾಣಿಸುತ್ತವೆ.

**ಸುನೀಲ್ ಮಮದಾಪುರ**

ಸುನೀಲ್ ಮಮದಾಪುರ ಅವರು ೧೯೭೭ರಲ್ಲಿ ವಿಜಯಪುರದಲ್ಲಿ ಜನಿಸಿದರು. ಇವರು ಮಧ್ಯಮ ವರ್ಗದವರಾಗಿದ್ದು, ಕಲೆಗೆ ಚಿಕ್ಕವರಿಂದಾಗಿನಿಂದ ಇಷ್ಟಪಡುತ್ತಿದ್ದರು. ನಂತರ ದಿನಗಳಲ್ಲಿ ಚಿತ್ರಕಲೆ ಅವರ ಆಸಕ್ತಿ ಹೆಚ್ಚಾದ ಕಾರಣ ಮತ್ತು ಜೀವನವನ್ನು ಕಲೆಗೋಸ್ಕರವೇ ಇಟ್ಟರು ಯೆಂದರೆ ತಪ್ಪಾಗಲಾರದು. ಇವರು ಹುಟ್ಟಿದು ಬೆಳೆದಿದ್ದು ವಿಜಯಪುರದಲ್ಲಿ ನಂತರದ ದಿನಗಳಲ್ಲಿ ಅಂದರೆ ೧೯೯೭ರಲ್ಲಿ ಡಿಪ್ಲೋಮೂ, ಚಿತ್ರಕಲೆ ಕೆನ್ ಸ್ಕೂಲ್ ಕಲಾಮಂದಿರ, ಬೆಂಗಳೂರಿನಲ್ಲಿ ಕಲಿತರು. ಅವರಿಗೆ ಚಿತ್ರಕಲೆಯ ಕುರಿತಾದ ಇದ್ದ ಶ್ರದ್ದೆ ಏನಾದರು ಸಾದಿಸಬೇಕೆಂಬ ಹಂಬಲ ಅವರಿಗೆ ಕಾಡುತ್ತಿತ್ತು. ಆದ ನಂತರ ಅವರಿಗೆ ಮುಂದಿನ "ಕಲಾಶಿಕ್ಷಣಕ್ಕೆ ತಂದೆ ಒಪ್ಪದೆ ಇದ್ದ ಕಾರಣ ಕಲಾವಿದರಾದ ದಿ.ಶ್ರೀಧರ್ ಚವ್ಹಾಣರನ್ನು ಮತ್ತು ತಂದೆಯವರನ್ನು ಕರೆದು ಕೊಂಡು ಹಿರಿಯ ಕಲಾವಿದರಾದ ಸಿ.ಚಂದ್ರಶೇಖರ್ ಅವರ ಬಳಿಗೆ ಹೋಗಿ ಒಪ್ಪಿಸಿದರು ಎಂದು ಸ್ವತಃ ಸಿ.ಚಂದ್ರಶೇಖರ್ ಅವರು ಸಂಧರ್ಶನದಲ್ಲಿ ಹೇಳೀದ್ದಾರೆ." ಇವರು ಬೆಂಗಳೂರಿಗೆ ಬರಲು ಕಲಾವಿದ ದಿ.ಶ್ರೀಧರ್ ಚವ್ಹಾಣರೆ ಕಾರಣ ಎಂದು ಹೇಳಿದ್ದಾರೆ. ಸತತವಾಗಿ ಕಲಾಕೃತಿ ರಚನೆಯಲ್ಲಿ ತೊಡಗಿದ ಸುನೀಲ್ ರವರಿಗೆ ಸರ್ರಿಯಲಿಸಂ ಪಂಥ ತನ್ನ ಕಡೆಗೆ ಗಮನ ಸೆಳೆಯಿತು ಎಂದರೇ ತಪ್ಪಾಗಲಾರದು. ಇವರ ಭಿನ್ನವಾದ ಯೋಚನಾ ಶಕ್ತಿ ಮತ್ತು ಸೃಜನಶೀಲತೆ ಎಲ್ಲರ ಮೆಚ್ಚುಗೆ ಪಡೆಯಿತು. ನಂತರ ಇವರು ಬರೋಡಾಗೆ ತೆರಳಿದರು ಅಲ್ಲಿ ೨೦೦೦ನೇ ಇಸ್ವಿ ಯಲ್ಲಿ ಪೋಸ್ಟ್ ಡಿಪ್ಲೋಮೂ ಗ್ರಾಫಿಕ್, ಕಲೆಯಲ್ಲಿ ಮುಗಿಸಿಕಂಡರು ಅಲ್ಲಿಯ ಕಲಾವಿದರು ಮಗಳಜೋತೆ ವಿವಾಹವಾಗಿ, ಕಲಾ ಚಟುವಟಿಕೆಗಳಲ್ಲಿ ಭಾಗವಹಿಸುತ್ತಾ ಮುಂದೆ ೨೦೦೧-೦೨ರಲ್ಲಿ ಪೋಸ್ಟ್ ಎಕ್ಸ್‌ಪ್ರೇನ್ಸ್ ಪ್ರೋಗ್ರಾಮ್ (ಪ್ಸೊಂಸರ್ಡ್ ಬಾಯ್‌ದ ಕಾಮನವೆಲ್ತ್ ಫೌಂಡೇಶನ್) ಇನ್ ಗ್ಲಾಸ್‌ಗೌನ್ ಪ್ರಿಂಟ್ ಸ್ಟುಡಿಯೋ ಸ್ಕೊತಲಾಂಡ ಯು.ಕೆ.ಯಲ್ಲಿ ವಿಶೇಷ ಪರಿಣಿತಿ ಪಡೆದುಕೊಂಡು ಬಂದರು.

ಈ ಕಲಾವಿರು ತಮ್ಮದೆ ಆದ ವಿಭಿನ್ನರೀತಿಯ ಸರ್ರಿಯಲಿಸಂ ಪಂಥದಲ್ಲಿ ಕಲಾಕೃತಿಗಳನ್ನು ರಚಿಸುತ್ತಾರೆ. ಇವರ ಪ್ರಭಾವ ಅನೇಕರ ಮೇಲೆ ಬೀರಿದೆ. ವಿಶೇಷವಾಗಿ ವಿಜಯಪುರದ ಕಲಾವಿದರುಗಳಿಗೆ. ಅದರಲ್ಲಿಯು ನನಗೂ ಇವರ ಕಲಾಕೃತಿಗಳನ್ನು ನೋಡಿದಾಗ ಹೊಸತನದ ಹುಡುಕಾಟದಲ್ಲಿ ನಾನು ಸಹ ಅದೇ ಶೈಲಿಯಲ್ಲಿ ಕಲಾಕೃತಿ ರಚಿಸಲು ಪ್ರಯತ್ನಿಸುತ್ತಿದ್ದೆನೆ. ಇವರ ಕಲಾಕೃತಿಗಳಲ್ಲಿ ಸಾಮಾಜಿಕ ಚಿಂತನೆಗಳು, ರಾಜಕೀಯ ವಿಚಾರಗಳು ಎದ್ದು ಕಾಣಿಸುತ್ತವೆ. ನಾವು ಊಹೆ ಮಾಡಿಕೊಳ್ಳಲೂ ಸಾಧ್ಯವಾಗದ ರೀತಿಯಲ್ಲಿ ಇವರು ವಿಷಯ ಮತ್ತು ವಸ್ತುಗಳ ಜೋಡನೆಯನ್ನು

ಇವರ ಕಲಾಕೃತಿಗಳಲ್ಲಿ ಕಾಣುತ್ತವೆ. ಅನೇಕರಿಗೆ ಸ್ಫೂರ್ತಿಯಾಗುವ ಇವರು ದೇಶ, ವಿದೇಶದಲ್ಲಿ ಹೆಸರು ಮಾಡಿದ್ದಾರೆ. ಇವರ ಕಲಾಕೃತಿಗಳಿಗೆ ತುಂಬಾ ಬೇಡಿಕೆಯಿದ್ದು. ಹಿಂದಿ ಚಲನಚಿತ್ರ ನಟ,ನಟಿಯರ ಮನೆಯಲ್ಲಿ ಇವರ ಕಲಾಕೃತಿಗಳನ್ನು ನಾವು ನೋಡಬಹುದು. ಇಂತಹ ಕಲಾವಿದರು ಕರ್ನಾಟಕದವರು ಎಂದು ಹೇಳಲು ಹೆಮ್ಮೆ ಅನಿಸುತ್ತದೆ. ಮೂರ್ತಿ ಚಿಕ್ಕದಾದರು ಕೀರ್ತಿ ದೊಡ್ಡದು ಎಂಬಂತೆ ಇವರ ಪ್ರತಿಭೆ ಇವರ ಕಲಾಕೃತಿಗಳು ತೋರಿಸುತ್ತವೆ. ಇವರು ಹಲವಾರು ಶಿಬಿರಗಳಲ್ಲಿ ಭಾಗವಹಿಸಿದ್ದಾರೆ. ಹಲವಾರು ಬಾರಿ ಕಲಾಕೃತಿ ಪ್ರದರ್ಶನ ಮಾಡುತ್ತಾ ಬರುತ್ತಿದ್ದಾರೆ. ಹಲವಾರು ಸಂಘ ಸಂಸ್ಥೆಗಳಿಂದ ಸರಕಾರಗಳಿಂದ ಪ್ರಶಸ್ತಿ ಪಡೆದಿದ್ದಾರೆ. ಇವರಿಗೆ ಸಂಧ ಪ್ರಶಸ್ತಿಗಳು ಹೀಗಿವೆ.

೧೯೯೬ರ ವಾರ್ಷಿಕ ಚಿತ್ರಕಲಾ ಪ್ರದರ್ಶನದಲ್ಲಿ ಅವಾರ್ಡ್ ಇನ್ ಮೈಸೂರು ದಸರಾ. ೧೯೯೭–ಕರ್ನಾಟಕ ಲಲಿತಕಲಾ ಅಕಾಡೆಮಿ ಜೂನಿಯರ್ ಫೆಲೋಸಿಪ್ ಮತ್ತು ಅಂತರಾಷ್ಟ್ರೀಯ ಪ್ರದರ್ಶನ. ೧೯೯೭–ಕರ್ನಾಟಕ ರಾಜ್ಯ ಚಿತ್ರಕಲಾ ಲಲಿತಕಲಾ ಅಕಾಡೆಮಿ ೨೭ನೇ ವಾರ್ಷಿಕೋತ್ಸವ ಚಿತ್ರಕಲೆ ಪ್ರದರ್ಶನ ಮತ್ತು ಅವಾರ್ಡ, ಬೆಂಗಳೂರು. ೧೯೯೭ರಲ್ಲಿ ಹೊನೆರೆಬಲ್ಲ್ ಅವಾರ್ಡ್ ಮತ್ತು ಹನ್ನೊಂದನೆಯ ಆಲ್ ಇಂಡಿಯಾ ಎಸ್.ಸಿ.ಝಡ್.ಸಿ ಸೆಂಟರ್ ನಾಗಪುರ, ಮಹಾರಾಷ್ಟ್ರ. ೧೯೯೭ರಲ್ಲಿ ಆಲ್ ಇಂಡಿಯಾ ಕ್ರಾಪ್ಟ್ ಸೊಸೈಟಿ ವತಿಯಿಂದ ಕರ್ನಾಟಕ ರಾಜ್ಯ ಪ್ರದರ್ಶನ ಮತ್ತು ಅವಾರ್ಡ್. ಅದೇ ವರ್ಷ ೫೦ನೇ ವರ್ಷದ ಚಿತ್ರಕಲೆ ಸ್ವತಂತ್ರೋತ್ಸವ ದಿನದಂದು ಪ್ರದರ್ಶ ಮತ್ತು ಅವಾರ್ಡ್ ವಿಜಯಪುರ. ೧೯೯೮ರಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿ ಬೆಂಗಳೂರು ಮತ್ತು ಭಾರತ ಲಲಿತಕಲಾ ಅಕಾಡೆಮಿ ದೆಹಲಿ ವಿಶೇಷ ಚಿತ್ರಕಲಾ ಪ್ರದರ್ಶನ ಮತ್ತು ಅವಾರ್ಡ್. ಅದೇ ವರ್ಷ ಮುಂಬಯಿ ಚಿತ್ರಕಲಾ ಸಂಸ್ಥೆಯು ೧೦೬ನೇ ಇಂಡಿಯಾ ವಾರ್ಷಿಕೋತ್ಸವ ಪ್ರದರ್ಶನ ಮತ್ತು ಅವಾರ್ಡ್, ಮುಂಬಯಿ ಹೀಗೆ ಅನೇಕ ಕಲಾ ಪ್ರದರ್ಶನಗಳಲ್ಲಿ ಭಾಗವಹಿಸಿ ಅನೇಕ ಪ್ರಶಸ್ತಿ ಪದೆದುಕೂಂಡಿದ್ದಾರೆ. ಇವರು ಈಗಾ ಹೈದರಾಬಾದ್ ಸೆಂಟರಲ್ ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕರಾಗಿ ತಮ್ಮ ಸೇವೆ ಸಲ್ಲಿಸುತಿದ್ದಾರೆ. ಇವರ ಸಾಧನೆ ಅಪಾರವಾದದ್ದು ಎಂದು ಹೇಳಬಹುದು.

ರುದ್ರಗೌಡ ಇಂಡಿ.

ರುದ್ರಗೌಡ ಇಂಡಿಯವರು ವಿಜಯಪುರದ ಇಂಡಿಯಲ್ಲಿ ೬ನೇ ಜೂನ್ ೧೯೭೬ರಲ್ಲಿ ಜನಿಸಿದರು ತಂದೆ ಲಕ್ಷ್ಮಣ, ತಾಯಿ ಶಾಂತಾಬಾಯಿ. ಇವರಿಗೆ ಪ್ರಾಥಮಿಕ ಶಾಲಾ ಹಂತದಲ್ಲಿ ಚಿತ್ರಕಲೆ ತುಂಬಾ ಚನ್ನಾಗಿ ಬಿಡಿಸುತ್ತಿದ್ದರು. ನಂತರ ಪ್ರೌಢ ಶಾಲೆಯಲ್ಲಿ ಇದ್ದಾಗ ಭಾವ ಚಿತ್ರ ಮತ್ತು ನಿಸರ್ಗ ಚಿತ್ರಣ ಮಾಡಲು ಪ್ರಾರಂಭಿಸಿದರು ಆದ ಕಾರಣ ಎಸ್.ಎಸ್.ಎಲ್.ಸಿ. ಮುಗಿದ ನಂತರ ಎ.ಎಂ.ಜಿ.ಡಿ. ಮತ್ತು ಬ್ಯಾಚುಲರ್ ಪದವಿಯನ್ನು ಪಡೆಯಲು ವಿಜಯಪುರದ ಶ್ರೀ ಸಿದ್ದೇಶ್ವರ ಕಲಾ ಮಂದಿರದಲ್ಲಿ ಪ್ರವೇಶ ಪಡೆದರು ಅಲ್ಲಿನ ಕಲಾ ವಾತಾವರಣ ಅವರ ಮೇಲೆ ತುಂಬಾ ಪ್ರಭಾವಬೀರಿತು. ಸಾಮಾನ್ಯ ವರ್ಗದ ಮನೆತನದಿಂದ ಬಂದ ಇವರಿಗೆ ಬದುಕಿನ ಕಷ್ಟದ ಅರಿವು ಆಗಿ ಚಿತ್ರಕಲೆಯಲ್ಲಿ ಸಾಧನೆ ಮಾಡಬೇಕು ಎಂದು ಅಂದುಕೊಂಡು. ಕಲಾಶಾಲೆಯಲ್ಲಿ

ಕಲಿಯುವಾಗ ಅಲ್ಲಿನ ಕಲಾ ಚಟುವಟಿಕೆಗಳು ಮತ್ತು ಬಿ.ಎಫ್.ಎ. ಇದ್ದಾಗ ಸುನೀಲ್ ಮಮದಾಪುರವರು ಒಂದು ಶಿಬಿರ ಮಾಡಿದರು ಅದರಲ್ಲಿ ಇಂಡಿ ಯವರು ಸಹ ಭಾಗವಹಿಸಿದ್ದರು. ಇವರ ಚಿತ್ರರಚನಾ ಶೈಲಿಯನ್ನು ನೋಡಿದ ಮಮದಾಪುರ್ ರವರು ಇಷ್ಟಪಟ್ಟು ಮಾರ್ಗದರ್ಶನ ಮಾಡಿದರು. ಅಂದಿನ ವೇಳೆಯಲ್ಲಿ ಸುನೀಲ್ ಮಮದಾಪುರ್ ಅವರು ತುಂಬಾ ಹೇಸರು ಮಾಡಿದ್ದರು. ಅವರ ಕ್ಯಾಟಲಾಗ್ ಯಾರಿಗು ಕೊಡುತ್ತಿರಲಿಲ್ಲಾ. ಇಂಡಿಯವರ ಕಲಾಕೃತಿ ನೋಡಿ ಅವರಿಗೆ ಒಂದು ಕ್ಯಾಟಲಾಗ್ ಕೊಟ್ಟರು ಎಂದು ಸ್ವತಃ ಇಂಡಿಯವರೆ ಹೇಳಿಕೊಂಡಿದ್ದಾರೆ. ಆದನಂತರ ಕಲಾ ಶಾಲೆಯಲ್ಲಿದ್ದ ಗ್ರಂಥಾಲಯಕ್ಕೆ ಹೋಗಿ ನೊಡಿದಾಗ ಎರಡು ಪುಸ್ತಕ ಸಿಕ್ಕವು ಒಂದು ಸಾಲ್ವರ್ ಡಾಲಿಯದ್ದು ಎರಡು ಡಾ.ವಿಂಚಿಯದ್ದು ಕಲಾವಿದರಿಗೆ ವಿಂಚಿ ಮಸ್ತಕ ಇಷ್ಟ ಆಗಲಿಲ್ಲಾ ಏಕೆಂದರೆ ಅವರ ಚಿತ್ರ ಅವರಿಗೆ ತಿಳಿಯದ ಕಾರಣ ಆದರೆ ಡಾಲಿಯವರ ಕಲಾಕೃತಿಗಳನ್ನು ನೋಡಿದಾಗ ತುಂಬಾ ಇಷ್ಟವಾದವು ಆದ್ದರಿಂದ ಅವರು ಆ ಮಸ್ತಕ ಓದಿ ಆ ಕಲಾಕೃತಿಗಳನ್ನು ನೋಡಿ ಸ್ವಲ್ಪ ಅವರ ಆಲೋಚನೆಗಳು ಡಾಲಿಯ ಆಲೋಚನೆಗಳು ಒಂದೆ ರೀತಿಯದಾಗಿದ್ದು ಆ ಕಾರಣ ಸರ್ರಿಯಲಿಸಂಗೆ ವಾಲಿದರು ಎಂದರು.

ಆರ್ಟ್ ಮಾಸ್ಟರ್ ಮತ್ತು ಡಿಪ್ಲೋಮೂ ಇನ್ ಪೇಂಟಿಂಗ್ ಅನ್ನೂ ವಿಜಯಪುರದಲ್ಲಿ ಮುಗಿಸಿ ನಂತರ ಬಿ.ಎಫ್.ಎ.ಇನ್ ಪೇಂಟಿಂಗ್ ಪದವಿಯನ್ನು ದಾರವಾಡ ವಿಶ್ವವಿದ್ಯಾಲಯದಿಂದ ಪಡೆದರು. ಇವರು ಕಲಾಶಾಲೆಯಲ್ಲಿ ಇರುವಾಗ ಶಿಕ್ಷಕರಾದ ದಿ. ಕಾಚಾಪುರ್ ಅವರು ಮತ್ತು ಪಿ.ಎಸ್.ಕಡೆಮನಿಯವರ ಪ್ರಭಾವವಾದರು ಸಹಿತ ಹೊಸತನದ ಹುಡುಕಾಟದಲಿದ್ದ ಇವರಿಗೆ ಬೆಂಗಳೂರು ಕೈಬಿಸಿ ಕರೆಯಿತು. ೨೦೦೪ರಲ್ಲಿ ಬೆಂಗಳೂರಿಗೆ ಹೊದಮೇಲೆ ಅಲ್ಲಿನ ಕಲಾ ಸ್ನೇಹಿತರ ಜೋತೆಗೂಡಿ ಇಂಡಿಯವರು ತಮ್ಮದೆ ಆದ ಶೈಲಿಯನ್ನು ರೂಡಿಸಿಕೊಂಡರು ಸುನೀಲ್ ಮಮದಾಪುರ್ ಅವರ ಸ್ನೇಹ ಬೆಂಗಳೂರಿನಲ್ಲಿ ಸೆರಿತು. ಇವರು ಸಹ ಸತತವಾಗಿ ಹೊಸ ಹೊಸ ಆವಿಷ್ಕಾರಗಳಲ್ಲಿ ತೋಡಗಿದರು. ತಮ್ಮ ಕನಸಿನ ಲೋಕದಲ್ಲಿ ತೇಲಾಡುವ ಅನೇಕ ಕಲಾಕೃತಿಗಳನ್ನು ರಚಿಸಿದರು. ಅಕ್ರ್ಯಾಲಿಕ್ ಮಾಧ್ಯಮ ಮತ್ತು ಜಲವರ್ಣ ಮಾಧ್ಯಮದಿಂದ ಕಲಾಕೃತಿಯನ್ನು ರಚಿಸುತ್ತಿದ್ದಾರೆ. ಸಾಮಾಜಿಕವಾದ ಕೇಲವು ಸಮಸ್ಯೆಗಳ ಕುರಿತು ರಾಜಕೀಯ ವಿಚಾರಗಳ ಕುರಿತಾದ ಕಲಾಕೃತಿಗಳನ್ನು ಇವರು ರಚಿಸಿದ್ದಾರೆ. ಇವರು ಜಲವರ್ಣ ಮಾಧ್ಯಮದಲ್ಲಿ ಇವರ ಕಲಾಕೃತಿಗಳು ತುಂಬಾ ವಿಭಿನ್ನ ರಿತಿಯಲ್ಲಿ ಬೃಹದಾಕಾರದಲ್ಲಿ ಅಭಿವ್ಯಕ್ತಿಸಿದ್ದಾರೆ. ರಾಜ್ಯ ಮತ್ತು ರಾಷ್ಟ್ರಮಟ್ಟದ ಅನೇಕ ಕಲಾ ಶಿಬಿರಗಳು ಮತ್ತು ಕಲಾ ಪ್ರದರ್ಶನದಲ್ಲಿ ಭಾಗವಹಿಸಿದ್ದಾರೆ.

### ನಂದಬಸಪ್ಪಾ ವಾಡೆ

ನಂದಬಸಪ್ಪಾ ಅವರು ೧೯೭೭ರಲ್ಲಿ ವಿಜಯಪುರ ಜಿಲ್ಲೆಯ ಮಿಂಚನಾಳದಲ್ಲಿ ಜನಿಸಿದರು. ತಂದೆ ಮಲ್ಲಪ್ಪ, ತಾಯಿ ಲಕ್ಷ್ಮಿಬಾಯಿ. ಇವರಿಗೆ ಬಾಲ್ಯದಿಂದಲು ಚಿತ್ರಕಲೆಯಲ್ಲಿ ಆಸಕ್ತಿ ಇದ್ದ

ಕಾರಣ ಚಿತ್ರಕಲಾ ಶಿಕ್ಷಣ ಪಡೆಯಲು ಮುಂದಾದರು. ವಿಜಯಪುರದಲ್ಲಿ ೧೯೯೬-೧೯೯೭ರಲ್ಲಿ ಎ.ಎಂ.ಜಿ.ಡಿಯನ್ನು ಮುಗಿಸಿ. ಬಿ.ಎಫ್.ಎ (ಬ್ಯಾಚುಲರ್ ಆಫ್ ಫೈನ್ ಆರ್ಟ) ಪದವಿಯನ್ನು ರವಿಂದ್ರ ಕಲಾ ನಿಕೇತನ, ತುಮಕೂರಿನಲ್ಲಿ ಪದೆದರು. ಇವರು ಕಲಿಕೆಯ ಹಂತದಲ್ಲಿ ಅನೇಕ ಮಾಧ್ಯಮಗಳಲ್ಲಿ ಕಲಾಕೃತಿಗಳನ್ನು ರಚಿಸಿದ್ದಾರೆ ಪ್ರಯೋಗಗಳನ್ನು ಮಾಡಿದ್ದಾರೆ.ಇವರು ತಮ್ಮದೆ ಆದ ಒಂದು ಶೈಲಿಯನ್ನು ರೂಪಿಸಿಕೂಳ್ಳಲು ಸಾಕಷ್ಟು ಪ್ರಯತ್ನಪಟ್ಟು ಸೃಜನಾತ್ಮಕವಾಗಿ ಮತ್ತು ಗ್ರಾಮಿಣ ಪ್ರದೇಶದ ಸೋಗಡನ್ನು ಬಿಂಬಿಸುವ ಚಿತ್ರಕಲಾಕೃತಿಗಳನ್ನು ಅಕ್ರಾಲಿಕ್ ಮಾಧ್ಯಮದಲ್ಲಿ ರಚಿಸುತ್ತಿದ್ದಾರೆ. ಇವರು ಅನೇಕ ಕಲಾಪ್ರದರ್ಶನಗಳಲ್ಲಿ ಭಾಗವಹಿಸಿದ್ದಾರೆ ಶಿಕ್ಷಣ ಮುಗಿದ ನಂತರ ೨೦೦೪ರಲ್ಲಿ ಬೆಂಗಳೂರಿನಲ್ಲಿ ಕುಟುಂಬ ಸಮೇತ ವಾಸವಾಗಿ ಅಲ್ಲಿನ ಶೇಶಾದ್ರಿಪುರ ಪಬ್ಲಿಕ್ ಸ್ಕೂಲ್‌ನಲ್ಲಿ ಶಿಕ್ಷಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಇವರು ಚಿರಕಲಾ ಕ್ಷೇತ್ರದಲ್ಲಿ ನಡೆಯವ ಅನೇಕ ಕಲಾ ಚಟುವಟಿಕೆಗಲಲ್ಲಿ ಭಾಗವಹಿಸುತ್ತಾ ಇದ್ದಾರೆ.

ಇವರು ಅನೇಕ ಕಲಾಶಿಬಿರ ಮತ್ತು ಕಲಾ ಪ್ರದರ್ಶನದಲ್ಲಿ ಭಾಗವಹಿಸಿದ್ದಾರೆ ಕೆಲವು ಈ ಕೇಳಗಿನಂತಿವೆ. ವಿಜಯಪುರದ ನವರಸಪುರ ಉತ್ಸವದಲ್ಲಿ ಪ್ರಶಸ್ತಿ ಪಡೆದುಕೊಂಡಿದ್ದಾರೆ. ಹಂಪಿ ಉತ್ಸವದಲ್ಲಿ ಮತ್ತು ರವೀಂದ್ರ ಕಲಾ ನಕೇತನ ತುಮಕೂರು. ಗುಬ್ಬಿ ವಿರಣ್ಣ ಆರ್ಟ್ ಗ್ಯಾಲರಿ ಬೆಂಗಳೂರು. ಚಿತ್ರಕಲಾ ಪರಿಷತ್ತು ಬೆಂಗಳೂರು, ಶೃತಿ ಆಟ್ ಗ್ಯಾಲರಿ ಬೆಂಗಳೂರು ಇನ್ನು ಅನೇಕ ಸ್ಥಳಗಳಲ್ಲಿ ಕಲಾ ಪ್ರದರ್ಶನಗಳನ್ನು ಮಾಡಿದ್ದಾರೆ. ಇವರ ಕಲಾಕೃತಿಗಳು, ಕಲಾ ಪ್ರೇಮಿಗಳು ಮತ್ತು ಕಲಾವಿದರ ಮೇಚ್ಚುಗೆಗೆ ಪಾತ್ರವಾಗಿದ್ದಾವೆ. ಇವರು ತಮ್ಮ ಕಲಾಕೃತಿಗಳಲ್ಲಿ ಸರ್ರಿಯಲಿಸಂ ಅಂಶಗಳನ್ನು ಬಳಸಿ ಕಲಾಕೃತಿಗಳನ್ನು ರಚಿಸುತ್ತಿದ್ದರೆ.

## ವೀರೇಶ ರುದ್ರಸ್ವಾಮಿ

ವೀರೇಶ ರುದ್ರಸ್ವಾಮಿಯವರು ಜುಲೈ ೧೯೮೨ರಲ್ಲಿ ಬಾಗಲಕೋಟ ಜಿಲ್ಲೆಯ ಹುನಗುಂದ ತಾಲುಕಿನ ನಾಗೂರಿನಲ್ಲಿ ಜನಿಸಿದರು. ತಂದೆ ಮಹಾಂತೆಶ ತಾಯಿ ರಂಗವ್ವ ವೀರೇಶವರು ಬಡ ಕುಟುಂಬದಲ್ಲಿ ಬೇಳೆದು ಬಂದವರು ತಂದೆ-ತಾಯಿ ಗ್ರಾನೆಟ್ ಕಾರ್ಮಿಕರು. ಇವರಿಗೆ ಬಾಲ್ಯದಿಂದಲೇ ಚಿತ್ರಕಲೆಯಲ್ಲಿ ಆಸಕ್ತಿ ಇತ್ತು ಎಂದು ಇವರ ಮಾತುಗಳಿಂದ ತಿಳಿದು ಬರುತ್ತದೆ. ಇವರು ಮಣ್ಣಿನ ಗೋಂಬೆಗಳನ್ನು ತುಂಬಾ ಇಷ್ಟಪಡುತ್ತಿದ್ದರು. ಲಾರಿ, ಬಸ್, ಟ್ಯಾಕ್ಟರ್ ಹಾಗೂ ಬಂಡ್ಡಿಗಳನ್ನು ಕೋಂಡು ಆಟವಾಡುವುದರ ಜೊತೆಗೆ ಅವುಗಳ ವಿನ್ಯಾಸಳ ಅರಿವಿನಿಂದ ಸ್ವಯಂ ತಯಾರಿಸಲು ಸುತ್ತಲು ದೊರೆತ ವಸ್ತುಗಳಿಂದ ಪ್ರಯತ್ನ ಪಡುತ್ತಿದ್ದರು.

ಉದಾ : ಸಿಗರೇಟ್ ಪ್ಯಾಕಿನಿಂದ ಲಾರಿ ಮತ್ತು ಬೆಂಕಿಪಟ್ಟಣದಿಂದ ಗಾಡಿಗಳನ್ನು ಬಸ್, ಲಾರಿ, ಟ್ಯಾಕ್ಟರ್ ಇತ್ಯಾದಿ ಆಟವಾಡುವ ಸಾಮಗ್ರಿಗಳನ್ನು ಮಾಡುತ್ತಿದ್ದರು. ಅವರದ್ದು ಹಳ್ಳಿಯಾಗಿರುವದರಿಂದ ನಿಸರ್ಗ ದತ್ತವಾದ ವಸ್ತುಗಳಿಂದ ಸಹ ಗೋಂಬೆಗೆಳನ್ನು ಆಟಿಕೆಗಳನ್ನು ಮಾಡುತ್ತಿದ್ದರು. ಜೋಳದ

ಬೆಂಡಿನಿಂದ ಗಾಡಿ, ಗಾಳಿಗೆ ತಿರುಗುವ ಚಕ್ರ, ಮಣ್ಣಿನಲ್ಲಿ ಬಂಡಿ ಎತ್ತುಗಳು, ಮಾವಿನ ವಾಟೆಯಿಂದ ತಿರುಗುವ ಗಿರಗಿಟಲೆಯನ್ನು ಮಾಡುವದು ಹೀಗೆ ತಮ್ಮ ಕರಕುಶಲತೆಯನ್ನು ಅಬಿವ್ಯಕ್ತ ಪಡಿಸುತ್ತಿದ್ದರು.

ಇವರು ಚಿತ್ರಕಲೆಯಲ್ಲಿ ಆಸಕ್ತಿ ಇದ್ದಕಾರಣ ಪ್ರೌಢ ಶಿಕ್ಷಣ ಪಡೆದನಂತರ ೨೦೦೭ರಲ್ಲಿ ಎ.ಟಿ.ಸಿ ಮುಗಿಸಿಕೊಂಡು ೨೦೧೦ರಲ್ಲಿ ಬಿ.ವಿ.ಎ (ಬ್ಯಾಚುಲರ್ ಆಪ್ ವಿಜುವಲ್ ಆರ್ಟ್)ನ್ನು ಕ.ವಿ.ವಿ.ಹಂಪಿ. ಶಿಲ್ಪ ಮತ್ತು ವರ್ಣಚಿತ್ರಕಲಾ ವಿಭಾಗ, ಬದಾಮಿ ಬನಶಂಕರಿಯಲ್ಲಿ ಕಲಿತರು. ನಂತರ ಸ್ನಾತಕೋತ್ತರ ಪದವಿಗೆ ಬೆಂಗಳೂರು ವಿಶ್ವವಿದ್ಯಾಲಯಕ್ಕೆ ತೆರಳಿದರು ಅಲ್ಲಿನ ಕಲಾವಾತವರಣ ತುಂಬಾ ಪ್ರಭಾವ ಬಿರಿತು ಸಮಕಾಲಿನ ಕಲೆಯ ಕುರಿತು ಅರಿವು ಮೂಡಿತು. ಪ್ರೋ. ಜೈಕುಮಾರ ಜಿ. ರಡ್ಡಿ. ಮತ್ತು ಎಸ್.ಜಿ. ವಾಸುದೇವ್ ಅವರ ವಿದ್ಯಾರ್ಥಿಯಾಗಿದಾಗ ಅವರ ಮಾತುಗಳು ಮತ್ತು ಅವರ ಕಲಾಕೃತಿಗಳ ಪ್ರಬಾವ ವೀರೇಶ ರವರ ಮೇಲೆ ಬಿರತೊಡಗಿತು. ಬೆಂಗಳೂರಿನ ಕಲಾವಾತಾವರಣ ಅಲ್ಲಿ ನಡೆಯುವ ಕಲಾಚಟುವಟಿಕೆಗಳು ಕಲಾ ಪ್ರದರ್ಶನಗಳು ಮತ್ತು ಅಲ್ಲಿನ ಉಪನ್ಯಾಸಗಳು ಇವರ ಕಲಾಕೃತಿಗಳಲ್ಲಿ ಅನೇಕ ಬದಲಾವಣೆಗಳನ್ನು ತಂದವು. ಇವರು ಸಂಶೋಧನೆಯಲ್ಲಿ ಒಲವು ಇದ್ದಕಾರಣ ಕನ್ನಡ ವಿಶ್ವವಿದ್ಯಾಲಯ ಹಂಪಿಯಲ್ಲಿ ೨೦೧೬ರಲ್ಲಿ ಎಂ.ಫಿಲ್ ಪದವಿಯನ್ನು ಪಡೆಯಲು ಬಂದರು. ಹಂಪಿಯಲ್ಲಿನ ಸಾಹಿತ್ಯದ ಒಲವು ಕಲೆಯಬಗ್ಗೆ ಇರುವ ಪುಸ್ತಕಗಳು ಇವರ ಗಮನಸೇಳೆದವು ಅದರಿಂದ ಇವರಿಗರ ಹೊಸದೇನೊ ಸೃಷ್ಟಿಸಬೇಕೆಂಬ ಹಂಬಲ ಮೂಡಿತು.

ವಾಪಸ್ ಬೆಂಗಳೂರಿಗೆ ತೆರಳಿದ ನಂತರ ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಸಾಹಾಯಕ ಪ್ರಾಧ್ಯಾಪಕರಾಗಿ ಸೆವೆ ಸಲಿಸುತ್ತಿದ್ದಾರೆ. ಇವರು ಸತತ ಕಲಾಕೃತಿಯಲ್ಲಿ ಕೃಷಿಮಾಡಿ ತಮ್ಮದೆ ಆದ ಒಂದು ಶೈಲಿಯನ್ನು ಕಂಡುಕೊಂಡಿದಾರೆ. ರೇಖಾಚಿತ್ರಗಳು ಅಕ್ರಾಲಿಕ್ ಮತ್ತು ಜಲವರ್ಣ ಮಾದ್ಯಮದಲ್ಲಿ ತಮ್ಮ ಕಲಾಕೃತಿಯನ್ನು ನಿರ್ಮಿಸುತ್ತಾರೆ. ಇವರು ಅನೇಕ ಏಕವ್ಯಕ್ತಿ ಮತ್ತು ಸಮೂಹ ಕಲಾಪ್ರದರ್ಶನಗಳನ್ನು ಮಾಡಿದ್ದಾರೆ. ಪ್ರಶಸ್ತಿಗಳನ್ನು ಪಡೆದುಕೊಂಡಿದ್ದಾರೆ. ಇವರು ಇತ್ತಿಚಿನ ದಿನಗಳಲ್ಲಿ ಪ್ರತಿಷ್ಠಾಪನಾ ಕಲೆಯನ್ನು ವಿಬಿನ್ನ ರಿತಿಯಲ್ಲಿ ಅರ್ಥಬದ್ದವಾಗಿ ಸೃಷ್ಟಿಸುತ್ತಿದ್ದಾರೆ. ವರ್ಣಕಲಾಕೃತಿಗಳಲ್ಲಿ ಮತ್ತು ಪ್ರತಿಷ್ಠಾಪನಾ ಕಲೆಯಲ್ಲಿ ಸರ್‍ರಿಯಲಿಸಂನ ಕೆಲವು ಅಂಶಗಳನ್ನು ಕಾಣಬಹುದಾಗಿದೆ. ಇವರು ತಮ್ಮ ಕಲಾಕೃತಿಗಳ ಬಗ್ಗೆ ಹೀಗೆ ಹೇಳುತ್ತಾರೆ. "ಚಿತ್ರಕಲಾವಿದ ಸೃಷ್ಟಿಯ ಎಲ್ಲ ವಸ್ತುಗಳನ್ನು ಅನುಕಂಪದಿಂದ ನೋಡುವದರಿಂದ ಅವುಗಳೊಂದಿಗೆ ಮೈತ್ರಿ ಸಾದಿಸುವುದರಿಂದ ಅವೆಲ್ಲಾ ನನಗೆ ಜೀವಂತವಾಗಿ ಕಾಣಿಸುತ್ತವೆ. ಇದರಿಂದಾಗಿ ನಾನು ರಚಿಸಿದ ಚಿತ್ರಗಳಲ್ಲಿ ಜೀವ ತುಂಬಿಕೊಳುತ್ತವೆ. ಚಿತ್ರ ಜೀವಂತವಾಗಿ ಅಂದರೆ ಒಂದು ವಸ್ತು ನಮಗೆ ಕಾಣಲು ಬೆಳಕು ಯಾವ ರೀತಿ ಸಹಾಯ ಮಾಡುತ್ತದೆಯೋ ಕತ್ತಲೂ ಕೂಡ ಅದೇ ರೀತಿ ಸಹಕಾರಿ ಆಗಿದೆ. ಕತ್ತಲು ಬೆಳಕು ಬೇರೆ ಬೇರೆ ಸನ್ನಿವೇಶಗಳಲ್ಲಿ ನಮಗೆ ವಸ್ತುವಿನ ಬೇರೆ ಬೇರೆ ಆಯಾಮಗಳ ಬಗ್ಗೆ ಅದರ ಗುಣವಿಶೇಷಣಗಳ ಬಗ್ಗೆ ತಿಳಿದುಕೊಳ್ಳಲು ಸಾಧ್ಯವಾಗುತ್ತದೆ. ವಸ್ತುವನ್ನು ನೋಡಿ ಅದರ ಗುಣಗಳನ್ನು ತಿಳಿಯಲು

ಅನುಬವ ಹಾಗೂ ಸುಕ್ಷ್ಮ ನಿರೀಕ್ಷಣೆ ಎರಡನ್ನು ಒಳಗೊಂಡ ಕಲಾಕೃತಿಗಳು ಚಿತ್ರಿಸುವ ಪ್ರಯತ್ನವೆ ಈ ಚಿತ್ರಗಳು ಚಿತ್ರಿಸಲು ಪರಿಪೂರ್ಣ ಪೂರ್ಣಾನುಭವ ಮತ್ತು ಪಂಚೇಂದ್ರಿಯಗಳ ಪೂರ್ಣ ಸಹಕಾರ ನನಗೆ ಸಹಾಯವಾಯ್ತು ಎಂದಿದ್ದಾರೆ.

ವಸ್ತುಗಳ ಪ್ರತಿರೂಪವೆ ಚಿತ್ರಗಳಾಗಿ, ಇವತ್ತಿನ ಸಾಮಾಜಿಕ ಚಿಂತನೆಗಳನ್ನು ಮೂಡಿಸುತ್ತಿದ್ದಾರೆ. ತಿಭುಜಾಕೃತಿಯು ಚಿತ್ರದ ಒಂದು ವಿಷಯದ ವಸ್ತುವಾಗಿದೆ. ಹಗ್ಗ, ಪೈಪು ಈ ವಸ್ತುಗಳನ್ನು ಒಗ್ಗೂಡಿಸಿಕೊಂಡು ನೋಡುಗನಿಗೆ ಮೂರು ಬಾಹುಗಳಾಗಿ ಕಾಣುವುದು ಇಲ್ಲಿ ತ್ರಿಭುಜ ಅನ್ನುವುದಕ್ಕೆ ಸಾಕಷ್ಟು ಅರ್ಥ ಸ್ವರೂಪ ಕಲ್ಪಸಿಕೊಂಡುವಂಥದ್ದು ಕಂಡು ಬರುತ್ತದೆ. ಈ ಎಲ್ಲಾ ಸಮೂಹ ಸಂಗ್ರಹದಿಂದ ಹೊಸದು ಮಾಡಿದವಸ್ತು ಜೊಡಿಸಿ ಮತ್ತು ಸತ್ಯಾಸತ್ಯತೆಯನ್ನು ವಸ್ತುಗಳ ತೊರೆಯಲ್ಲಿ ಅಂದರೆ ಅದರ ಆಯಾಮ, ಆಕಾರ ಬಣ್ಣಗಳ ಮೂಲಕ ಅನುಭವಿಸಿ ಕಲಾಕೃತಿಗಳ ಮೂಲಕ ಅಭಿವ್ಯಕ್ತಪಡಿಸಿದ್ದಾರೆ.

## ಸರ್ರಿಯಲಿಸಂ ಬಗ್ಗೆ ಕಲಾವಿದರ ಅನಿಸಿಕೆ

ಸರ್ರಿಯಲಿಸಂ ಕಲಾಚಳುವಳಿ ಮತ್ತು ಕಲಾವಿದರ ಕಲಾಕೃತಿಯನ್ನು ನೋಡಿದಾಗ ಅವರ ಕೃತಿಗಳಲ್ಲಿ ಕಾಣುವ ಕನಸುಗಾರಿಕೆಯ ಪ್ರಭಾವ ಭ್ರಮೆ ನೀರಸ ಉಂಟಾಗುವ ದೃಶ್ಯ ಅದೊಂದು ಅದ್ಬುತವಾದ ಆಕಾರದಲ್ಲಿ ಹಾರಾಡೀದ ಹೊಸ ಹೊಸ ರೂಪವಾಗಿ ವಿಭಿನ್ನತೆಯ ಭಾವನೆಗಳ ನೋಟವಾಗಿ ಕಾಣುತ್ತೆವೆ. ಆ ಒಂದು ಸಹಜತೆಯು ಗಟ್ಟಿಗೊಂಡ ವಸ್ತುವಿಗೆ ಸುತ್ತಿಹಾಕಿಕೊಂಡು ಹಾರಾಡುವ ಭ್ರಮೆ ನೀಡುವಂಥದ್ದು ನನಗೆ ಕಲಾಕೃತಿ ನಿರ್ಮಿಸಲು ಸ್ಪೂರ್ಥಿನಿಡಿದೆ. ಹೊಸ ಹೊಸ ದಿಕ್ಕುಗಳು ಹಳೆಯ  ವಸ್ತುಗಳ ರೂಪಾಂತರ ಪ್ರಧಾನವಾಗಿ ಕೃತಿಯ ಸೌಂದರ್ಯ ಆಸ್ವಾದಿಸಲು ಸಾದ್ಯವಾಗಿದೆ. 'ನಿನ್ನ ಕಲಾಕೃತಿಗೂ ಮತ್ತು ನಿನಗು ಇರುವ ಸಂಬಂಧ ಕಾಲ ಏನು...?' ಎಂಬ ಪ್ರಶ್ನೆಗೆ ಉತ್ತರ ನಿಗೂಢವಾಗಿ ಹುಡುಕಾಟದ ದಾರೀಯಲ್ಲಿ ನಾನು ಸದಾಕಾಲ ನನ್ನ ಕೆಲಸ ಮತ್ತು ಬದುಕಿನ ಬಗ್ಗೆ ಚಿಂತಿಸುತ್ತಾ ಅದನ್ನು ಜಿವನದಲ್ಲಿ ಅಳವಡಿಸಿಕೊಂಡು ಆತ್ಮದ ಬೆಳಕನ್ನು ಕಲಾಕೃತಿಯ ಮೂಲಕ ಸತ್ಯದ ಅತ್ತಿರ ಪ್ರತಿಬಿಂಬಿಸಲು ಪ್ರಯತ್ನಿಸಿದ್ದೇನೆ ಎಂದಿದ್ದಾರೆ.

## ನಿಂಗನಗೌಡ ಪಾಟೀಲ್

ನಿಂಗನಗೌಡ ಪಾಟೀಲ್ ಅವರು ೪ನೇ ಡಿಸೆಂಬರ್ ೧೯೮೪ರಲ್ಲಿ ವಿಜಯಪುರ ಜಿಲ್ಲೆಯ ಇಂಡಿ ತಾಲೂಕಿನ ಅರ್ಜನಾಳದಲ್ಲಿ ಜನಿಸಿದರು, ತಂದೆ ಚಂದ್ರಕಾಂತ, ತಾಯಿ ಶೈಲಶ್ರಿ ಇವರಿಗೆ ಬಾಲ್ಯದಿಂದಲೆ ಚಿತ್ರಕಲೆಯಲ್ಲಿ ತುಂಬಾ ಆಸಕ್ತಿ ಇತ್ತು ಶಾಲಾ ಹಂತದಲ್ಲಿ ಇರುವಾಗಲೆ ಅನೇಕ ಚಿತ್ರಗಳನ್ನು ರಚಿಸಿದ್ದರು. ಪ್ರೌಢ ಶಿಕ್ಷಣ ಮುಗಿದ ನಂತರ ವಿಜಯಪುರದ ಶ್ರೀ ಸಿದ್ದೇಶ್ವರ ಕಲಾ ಮಂದಿರಕ್ಕೆ ಕಲಾ ಶಿಕ್ಷಣ ಪಡೆಯಲು ಬಂದರು. ಅಲ್ಲಿ ಗುರುಗಳು ದಿ. ಸಿದ್ದಲಿಂಗ ಕಾಚಾಪುರ್

ಮತ್ತು ಪಿ.ಎಸ್. ಕಡೇಮನಿ, ವಿ.ವಿ.ಹಿರೇಮಠ, ಹನುಮಂತ ಕೇದ್ರಾಪುರ, ಎಂ.ಎಂ.ಕನ್ನೂರ ಈ ಐದು ಗುರುಗಳ ಮಾರ್ಗದರ್ಶನದಲ್ಲಿ ಅನೇಕ ಕಲಾಕೃತಿಗಳನ್ನು ರಚಿಸಿದರು. ಭಾವಚಿತ್ರ, ಭೂದೃಶ್ಯ ಚಿತ್ರ, ರೇಖಾಚಿತ್ರ ಎಲ್ಲಾ ರೀತಿಯ ಚಿತ್ರಗಳನ್ನು ರಚಿಸುವುದನ್ನು ಕರಗತ ಮಾಡಿಕೊಂಡಿದ್ದರು. ಕಲಾ ಶಾಲೆಯಲ್ಲಿ ನಡೆಯುವ ಕಲಾ ಚಟುವಟಿಕೆಗಳು, ಕಲಾ ಪ್ರದರ್ಶನಗಳು, ಕಲಾ ಶಿಬಿರಗಳಲ್ಲಿ ಭಾಗವಹಿಸಿದರು. ಇವರು ಅಕ್ರ್ಯಾಲಿಕ್ ಮತ್ತು ತೈಲವರ್ಣ ಮಾಧ್ಯಮ ಎರಡನ್ನು ಬಳಸುತ್ತಿದ್ದರು. ನಂತರದ ದಿನಗಳಲ್ಲಿ ಅಕ್ರ್ಯಾಲಿಕ್ ಒಂದನ್ನೆ ಬಳಸತೊಡಗಿದರು.

ವಿಜಯಪುರದಲ್ಲಿ ಅವರ ಸ್ನೇಹಿತರು ಮತ್ತು ಅನೇಕ ಕಲಾವಿದರ ಜೊತೆ ಇವರು ತುಂಬಾ ಒಡನಾಟವನ್ನಿಟ್ಟುಕೊಂಡಿದ್ದರು. ಇವರು ಕಲಾ ಕ್ಷೇತ್ರದಲ್ಲಿ ತುಂಬಾ ಹೇಸರು ಮಾಡಬೇಕೆಂಬ ಹಂಠ ಇವರಿಗೆ ಕಲಾಕೃತಿ ರಚನೆಯಲ್ಲಿ ಅನೇಕ ಪ್ರಯೊಗ ಮಾಡಲು ಮಾರ್ಗವಾದವು. ದಿ. ಶ್ರೀಧರ್ ಚವ್ಹಾಣರ ಕಲಾಕೃತಿಗಳು ಮತ್ತು ಸುನೀಲ್ ಮಮದಾಪುರವರ ಕಲಾಕೃತಿಗಳನ್ನು ನೋಡಿ ತುಂಬಾ ಪ್ರಭಾವಿತರಾದರು. ಪದವಿ ಹಂತದಲ್ಲೆ ತಮ್ಮ ಸೃಜನಾತ್ಮಕ ಕಲೆಯನ್ನು ಹೊರಹಾಕುವದರಲ್ಲಿ ಯಶಸ್ವಿಯಾದರು. ಇವರು ಬಿ.ವಿ.ಎ (ಬ್ಯಾಚುಲರ್ ಆಫ್ ವಿಜ್ಯೂವಲ್ ಆರ್ಟ್) ಮುಗಿದ ನಂತರ ಬರೋಡಾಗೆ ಸುನೀಲ್ ಮಮದಾಪುರವರ ಬಳಿಗೆ ತೆರಳಿದರು. ಅವರೊಡನೆ ಕಲಾಕೃತಿ ರಚಿಸುತ್ತಾ ಅವರ ಶೈಲಿಯನ್ನು ತಮ್ಮ ಕಲಾಕೃತಿಗಳಲ್ಲಿ ಅಳವಡಿಸಿಕೊಂಡರು ಎರಡು ವರ್ಷಗಳ ಕಾಲ ಅಲ್ಲಿಯೇ ಇದ್ದುಕೊಂಡು ಅನೇಕ ಕಲಾಕೃತಿಗಳನ್ನು ರಚಿಸಿದರು. ನಂತರ ಗುಲ್ಬರ್ಗಾಕ್ಕೆ ಬಂದು ಎಂ.ವಿ.ಎ.(ಮಾಸ್ಟರ್ ಆಫ್ ವಿಜ್ಯೂವಲ್ ಆರ್ಟ್) ೨೦೧೪ರಲ್ಲಿ ಎಂ.ಎಂ.ಕೆ. ಕಲಾ ಶಾಲೆಯಲ್ಲಿ ಪ್ರವೇಶ ಪಡೆದರು ಅಲ್ಲಿನ ಗುರುಗಳು ವಿ.ಜಿ.ಅಂದಾನಿಯವರ ಮಾರ್ಗದರ್ಶನ ಪಡೆದು ತಮ್ಮ ಕಲಾಕೃತಿಯಲ್ಲಿ ಇನ್ನೂ ಸೃಜನಾತ್ಮಕ ಶೈಲಿಯನ್ನು ಅಳವಡಿಸಿ ಕೊಂಡರು.

ದೇಶದ ಅನೇಕ ಕಡೆಗೆ ಕಲಾ ಪ್ರದರ್ಶನಗಳನ್ನು ಮಾಡಿದರು. ಅನೇಕ ಕಲಾ ಶಿಬಿರಗಳಲ್ಲಿ ಭಾಗವಹಿಸಿದರು ಅನೇಕ ಪ್ರಶಸ್ತಿಗಳನ್ನು ಸಹ ಪಡೆದುಕೊಂಡರು. ೨೦೦೮ರಲ್ಲಿ ರೂಟರಿ ಕ್ಲಬ್ ಆಫ್ ವಿಜಯಪುರ ಇನ್.ಕೋ.ಆಪರೇಶನ್ ವಿತ್ ಬಿ.ಎಲ್.ಡಿ.ಇ ಅಸೋಸಿಯಶನ್ ವಿಜಯಪುರ. ೨೦೧೭ರಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಧನಸಹಾಯದಲ್ಲಿ ಮತ್ತು ಅದೇ ವರ್ಷದಲ್ಲಿ ಲಲಿತ ಕಲಾ ಅಕಾಡೆಮಿ ಬೆಂಗಳೂರು ಧನಸಹಾಯದಲ್ಲಿ ಏಕವ್ಯಕ್ತಿ ಕಲಾಪ್ರದರ್ಶನವನ್ನು ಮಾಡಿದರು. ಹೀಗೆ ಸಮೂಹ ಕಲಾಪ್ರದರ್ಶನಗಳು ೨೦೦೮ರಲ್ಲಿ ೭ನೇ ಕರ್ನಾಟಕ ಕಲಾಮೇಳ ಬೆಂಗಳೂರು. ೨೦೧೦ರಲ್ಲಿ ಕರ್ನಾಟಕ ಕನ್ನಡ ಸಾಹಿತ್ಯ ಸಮ್ಮೇಳನ ಬೆಳಗಾವಿ. ೨೦೧೧-೨೦ನೇ ರಾಜ್ಯಮಟ್ಟದ ಕಲಾ ಪ್ರದರ್ಶನ (ಸಿದ್ದಲಿಂಗ ಫೈನ್ ಸೋಸೈಟಿ) ವಿಜಯಪುರ. ೨೦೧೫ರಲ್ಲಿ ಸ್ಪೇಸ್ ೬ ಗ್ರೂಪ್. ಶೋ ಸ್ಟೇಟ್ ಆರ್ಟ್ ಗ್ಯಾಲರಿ ಹೈದ್ರಾಬಾದ್ ಹೀಗೆ ಹಲವಾರು ಪ್ರದರ್ಶನಗಳಲ್ಲಿ ಭಾಗವಹಿಸಿದ್ದಾರೆ. ಅನೇಕ ರಾಜ್ಯ ಮತ್ತು ರಾಷ್ಟ್ರ ಮಟ್ಟದ ಶಿಬಿರಗಳಲ್ಲೂ ಭಾಗವಹಿಸುತ್ತಾ ತಮ್ಮ ಕಲಾಕೃತಿಗಳನ್ನು ರಚಿಸುತ್ತಾ ಇದ್ದಾರೆ. ಇವರು ಸ್ವತಂತ್ರ ಕಲಾವಿದರಾಗಿ ತಮ್ಮ ಕಲಾಕೃತಿಯಲ್ಲಿ ಸಾಮಾಜಿಕ ಚಿಂತನೆಗಳನ್ನು

ವ್ಯಕ್ತಪಡಿಸುವರ ಜೋತೆಗೆ ರಾಜಕೀಯ ವ್ಯವಸ್ಥೆಯ ಕುರಿತಾದ ಕಲಾಕೃತಿಗಳನ್ನು ಸಹ ಬಿಡಿಸಿದ್ದಾರೆ. ಅವರ ಕಲಾಕೃತಿಗಳನ್ನು ನೋಡುತ್ತಾ ಹೋದರೆ ಯಾವುದೂ ಒಂದು ಬ್ರಮೇಯಲ್ಲಿ ಹೋದಹಾಗೇ ಅನಿಸುತ್ತದೆ. ಇವರು ಸಾಲ್ವರ್ ಡಾಲಿಯನ್ನು ಮತ್ತು ಅವರ ಕಲಾಕೃತಿಯನ್ನು ತುಂಬಾ ಇಷ್ಟಪಡುವುದರ ಜೋತೆಗೆ ಅವರ ಶೈಲಿಯನ್ನು ಅಳವಡಿಸಿಕೊಂಡು ಚಿತ್ರರಚನೆಯಲ್ಲಿ ತೋಡಗಿದ್ದಾರೆ ಎಂದರೇ ತಪ್ಪಾಗಲಾರದು.

# ಅಧ್ಯಾಯ : ಐದು

## ಸಮಾರೋಪ

ಸಮಾರೋಪವು ಈ ಅಧ್ಯಯನದ ಕಳಸ, ಯಾವ ರೀತಿ ಒಂದು ದೇಗುಲಕ್ಕೆ ಕಳಸವಿಟ್ಟಾಗ ಅದು ಶೋಭಿತವಾಗಿ ಕಾಣುತ್ತದೆಯೋ ಅದೆ ತೆರನಾಗಿ ಈ ಅಧ್ಯಯನ ಪೂರ್ಣವಾಗಬೇಕಾದರೆ ಸಮಾರೋಪವು ಅತಿ ಅವಶ್ಯಕವಾಗಿದೆ. ಈ ಅಧ್ಯಯನದ ಆರಂಭದಿಂದ ಮುಕ್ತಾಯದವರೆಗೂ ನಡೆದು ಬಂದ ದಾರಿಯನ್ನು ಅದರಿಂದ ದೊರೆತ ಫಲಪ್ರದ ಅಂಶಗಳು ಭವಿಷ್ಯದಲ್ಲಿ ಇದಕ್ಕೆ ಹಿಡಿದಾದ ಸಂಶೋಧನಾ ಕಾರ್ಯಕ್ಕೆ ಒಂದು ಅದ್ಭುತವಾದ ಚೇತನ ಚಿಲುಮೆ ಎಂದರೆ ಅತಿಶಯೋಕ್ತಿಯಾಗಲಾರದು. ಹೊರತು ಪಡಿಸಿದರೆ, ಸಂಶೋಧನೆಯ ದೃಷ್ಟಿಯಿಂದ ಸಮಗ್ರವಾಗಿ ಈವರೆಗೆ ಯಾರೂ ಅಧ್ಯಯನ ಮಾಡದೇ ಇರುವುದನ್ನು ಇಲ್ಲಿ ಗಮನಸಲಾಗಿದೆ. ಸರ್‍ರಿಯಲಿಸಂ ಪಂಥಕ್ಕೆ ಇರುವ ಪ್ರಾಧಾನ್ಯತೆಯನ್ನು ದೃಶ್ಯಾತ್ಮಕ ನೆಲಪ್ರಸ್ತುತ ಸಂಪ್ರಬಂಧದಲ್ಲಿ ಸರ್‍ರಿಯಲಿಸಂ ಪಂಥದ (ಕರ್ನಾಟಕದ ಕಲಾಕೃತಿಗಳನ್ನು ಅನುಲಕ್ಷಿಸಿ) ಕುರಿತು ಇಲ್ಲಿಯವರೆಗೆ ಯಾವುದೇ ರೀತಿಯ ಗಂಭೀರ ಅಧ್ಯಯನಗಳು ನಡೆದಿಲ್ಲ. ಕನ್ನಡದಲ್ಲಿ ಈವರಿಗೆ ಈ ವಿಷಯದ ಬರವಣಿಗೆಯ ಕೊರತೆ ಎದ್ದು ಕಾಣಿಸುತ್ತಿದೆ. ಸರ್‍ರಿಯಲಿಸಂ ಮತ್ತು ಅದರ ಲಕ್ಷಣಗಳ ಕುರಿತು ಸ್ಥೂಲನೋಟ ಕೋಡುವ ಪರಿಚಯಾತ್ಮಕ ಕೆಲವು ಬಿಡಿ ಲೇಖನಗಳು; ಅಧ್ಯಯನ ಮಾಡುವ ನಿಟ್ಟಿನಲ್ಲಿ ಈ ಸಂಪ್ರಬಂಧ ರೂಪುತಾಳಿದೆ. ಪ್ರಸ್ತುತ ಸರ್‍ರಿಯಲಿಸಂ ಪಂಥ (ಕರ್ನಾಟಕದ ಸರ್‍ರಿಯಲಿಸಂ ಪಂಥದ ಕಲಾಕೃತಿಗಳನ್ನು ಅನುಲಕ್ಷಿಸಿ ಒಂದು ವಿಶ್ಲೇಷಣಾತ್ಮಕ ಅಧ್ಯಯನ) ಎಂಬ ಅಧ್ಯಯನದ ಪ್ರಮುಖ ಫಲಿತಗಳನ್ನು ಸಹ ಇಲ್ಲಿ ಕಂಡುಕೊಳ್ಳಲಾಗಿದೆ.

ಮೊದಲನೆಯ ಅಧ್ಯಯನದಲ್ಲಿ ಉದ್ದೇಶ, ಸ್ವರೂಪ, ವೈದಾನಿಕತೆ ಮತ್ತು ವ್ಯಾಪ್ತಿಯನ್ನು ಚರ್ಚಿಸಲಾಗಿದೆ. ಇಲ್ಲಿ ಯಾವ ಉದ್ದೇಶವನ್ನು ಹೊಂದಿ ಈ ಅಧ್ಯಯನವನ್ನು ನಡೆಸಬೇಕೆಂದು ಆಲೋಚಿಸಲಾಗಿದೆ. ಆ ಉದ್ದೇಶಗಳು ಈ ಸಂಪ್ರಬಂಧದ ವಿವಿಧ ಅಧ್ಯಾಯಗಳ ಮೂಲಕ ಈಡೇರಿದೆಯಂದು ಹೇಳಿದರೆ ತಪ್ಪಾಗಲಾರದು. ಅಧ್ಯಯನಕ್ಕೆ ಇಲ್ಲಿ ಪೂರ್ವಭಾವಿಯಾಗಿ ಗಟ್ಟಿಯಾದ ಭೂಮಿಕೆ ಈ ಅಧ್ಯಾಯದಲ್ಲಿ ನಡೆದಿದೆ.

ಎರಡನೆಯ ಅಧ್ಯಯನದಲ್ಲಿ ನವ್ಯಕಲೆಯ ಹುಟ್ಟು, ಬೆಳವಣಿಗೆ ಮತ್ತು ಹಲವು ಪಂಥಗಳ ಕಿರುಪರಿಚಯದ ಹಿನ್ನೆಲೆ. ಕರ್ನಾಟಕದ ಮೇಲೆ ನವ್ಯ ಕಲೆಗಳ ಪ್ರಭಾವ ಇಲ್ಲಿ ನವ್ಯಕಲಾ ಪಂಥಗಳ ಹುಟ್ಟು ಅದರ ಐತಿಹಾಸಿಕ ಹಿನ್ನೆಲೆ ಹಾಗೂ ಕರ್ನಾಟಕದ ಮೇಲೆ ನವ್ಯಕಲಾ ಪಂಥಗಳ ಪ್ರಭಾವದ ಹಿನ್ನೆಲೆ ಮತ್ತು ಕಲೆ ಬೆಳೆದುಬಂದಂತಹ ನೆಲೆ-ಹಿನ್ನೆಲೆಯನ್ನು ಇಲ್ಲಿ ಐತಿಹಾಸಿಕವಾಗಿ, ಚಾರಿತ್ರಿಕವಾಗಿ ಅನೇಕ ಆಧಾರಗಳ ಮೂಲಕ ಕಟ್ಟಿಕೊಡುವ ಪ್ರಯತ್ನ ಮಾಡಲಾಗಿದೆ. ಸರ್ರಿಯಲಿಸಂ ಪಂಥ ವಲಸೆಬಂದು ಕರ್ನಾಟದಲ್ಲಿ ನೆಲೆಯೂರಿದ ಬಗ್ಗೆ ಹಾಗೂ ಅದನ್ನು ಆಶ್ರಯ ನೀಡಿದ ವಿವರಗಳನ್ನು ಚಾರಿತ್ರಿಕ ವಿವರಗಳನ್ನು ಕಲಾಕೃತಿಗಳ ಹಿನ್ನೆಲೆಯಲ್ಲಿ ಸ್ಥೂಲವಾಗಿ ಅಧ್ಯಯನ ನಡೆಸಲಾಗಿದೆ.

ಮೂರನೆಯ ಅಧ್ಯಯದಲ್ಲಿ ಸರ್ರಿಯಲಿಸಂ ಪಂಥದ ಹುಟ್ಟು, ಬೆಳವಣಿಗೆ ಮತ್ತು ಲಕ್ಷಣಗಳು. ಈ ಸರ್ರಯಲಿಸಂ ಪಂಥ ಪಾಶ್ಚಾತ್ಯರಲ್ಲಿ ಹುಟ್ಟಿಕೊಂಡ ಕಾರಣ ಮತ್ತು ಅದರ ಪ್ರತಿಪಾದಕರು ಅದರ ಹಿನ್ನೇಲೆ ಹೇಳುವದರ ಜೋತೆಗೆ ಭಾರತಕ್ಕೆ ಸರ್ರಿಯಲಿಸಂ ಪಂಥದ ಪ್ರವೇಶ ಆದ ರೀತಿ ಮತ್ತು ಕರ್ನಾಟಕದಲ್ಲಿ ಆದ ಬೆಳವಣಿಗೆ ಕುರಿತು ಈ ಬಗೆಯ ಅರ್ಥ, ಸ್ವರೂಪ, ಹುಟ್ಟು, ಬೆಳವಣಿಗೆಗಳನ್ನು ಕುರಿತು ಅಧ್ಯಯನ ಮಾಡಲಾಗಿದೆ. ಸರ್ರಿಯಲಿಸಂ ಚಿತ್ರಕಲೆಯ ಲಕ್ಷಣಗಳ ಬಗ್ಗೆ ಇಲ್ಲಿ ಗುರುತಿಸಿ ಅಧ್ಯಯನ ಮಾಡಲಾಗಿದೆ.

ನಾಲ್ಕನೆಯ ಅಧ್ಯಯದಲ್ಲಿ ಕರ್ನಾಟಕದ ಸರ್ರಿಯಲಿಸಂ ಕಲಾಕೃತಿಗಳನ್ನು ವರ್ಗೀಕರಿಸಲಾಗಿದೆ. ಈ ಅಧ್ಯಯದಲ್ಲಿ ಸಾಮಾಜಿಕ, ರಾಜಕೀಯ, ನೈಸರ್ಗಿಕ ಮತ್ತು ವೈಯಕ್ತಿಕ ಎಚಿದು ನಾಲ್ಕು ಬಗೆಯ ಕಲಾಕೃತಿಗಳನ್ನು ವಿಂಗಡಿಸಲಾಗಿದೆ. ಪ್ರತಿಯೊಂದು ಕಲಾಕೃತಿಯಲ್ಲಿನ ವಸ್ತುವಿಷಯವನ್ನು ವಿಶ್ಲೇಷಣಾತ್ಮಕವಾಗಿ ವಿವರಿಸಲಾಗಿದೆ.

ಐದನೆಯ ಅಧ್ಯಾಯದಲ್ಲಿ ಕಲಾವಿದರು ತಮ್ಮ ನೆಲದ ಅನುಭವಗಳ ಸತ್ವಗಳನ್ನು ಹದವಾಗಿ ಬೆರಸಿ ಜೀವಂತಿಕೆಯಿಂದ ಅಭಿವ್ಯಕ್ತಿಸುತ್ತಿರುವದನ್ನು ಹೊರಗಿನ ಉತ್ತಮ ಅಂಶಗಳನ್ನು ನಮ್ಮದಾಗಿಸಿಕೊಂಡು ಹೊಸ ಕಸಿಯನ್ನು ಮಾಡುತ್ತಿರುವ ಕಲಾವಿದರ ಸಂಕ್ಷಿಪ್ತ ಪರಿಚಯ ಮಾಡಲಾಗಿದೆ.

ಆರನೆಯ ಅಧ್ಯಯನವು ಸಮಾರೋಪವಾಗಿದ್ದು ಪ್ರಸ್ತುತ ಸಂಪ್ರಬಂಧದ ಎಲ್ಲ ಐದು ಅಧ್ಯಾಯಗಳ ಸಮೀಕ್ಷೆಯನ್ನು ಚರ್ಚಿಸಲಾಗಿದೆ. ಫಲಿತಗಳ ವಿಶ್ಲೇಷಣೆಯನ್ನು ಈ ಅಧ್ಯಯದಲ್ಲಿ ಮಾಡಲಾಗಿದೆ.

**ಅಧ್ಯಯನದ ಫಲಿತಗಳು.**

ಪ್ರಸ್ತುತ ಸರ್ರಿಯಲಿಸಂ ಪಂಥ (ಕನಾಟಕದ ಕಲಾಕೃತಿಗಳನ್ನು ಅನುಲಕ್ಷಿಸಿ) ಅಧ್ಯಯನದಿಂದ ಈ ಕೆಳಗಿನಂತೆ ಫಲಿತಗಳನ್ನು ಕಂಡುಕೊಳ್ಳಲಾಗಿದೆ.

ಸರ್ರಿಯಲಿಸಂ ಪಂಥ ದೃಶ್ಯಕಲಾ ಕ್ಷೇತ್ರದಿಂದ ತುಂಬಾ ನಿರ್ಲಕ್ಷಿಸಲ್ಪಟ್ಟ ಮತ್ತು ಅಷ್ಟೇ ಸಮಕಾಲೀನ ಸಂದರ್ಭದಲ್ಲಿ ಪ್ರಸ್ತುತವಿರುವ ಹಾಗೂ ಪ್ರಭಾವಿಕಾರಿಯಾದ ಈ ಕಲಾ ಪ್ರಕಾರವನ್ನು ಮುಂಚೂಣಿಯಲ್ಲಿ

ಅಧ್ಯಯನ ಮಾಡುವ ಸಾಕಷ್ಟು ಅವಕಾಶವಿರುವುದನ್ನು ಪ್ರಸ್ತುತ ಅಧ್ಯಯನವು ಕಂಡುಕೊಂಡಿದೆ.

• ಅಜ್ಞಾತವಾಗಿದ್ದ ಕೆಲವು ಸರ್‍ರಿಯಲಿಸಂ ಪಂಥದ ಕರ್ನಾಟಕದ ಕಲಾಕೃತಿಗಳನ್ನು ಮತ್ತು ಕಲಾವಿದರನ್ನು ಪ್ರಥಮ ಬಾರಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

• ಸರ್‍ರಿಯಲಿಸಂ ಪಂಥ ನವ್ಯಕಲಾ ಪಂಥಗಳಲ್ಲಿ ಒಂದು ಬಹುಮುಖ್ಯವಾದ ಅಂಗವಾಗಿದ್ದು ಈ ಕಲಾ ಪ್ರಕಾರವನ್ನು ಚಿತ್ರಕಲೆಯ ಒಂದು ಅಭಿಭಾಜ್ಯ ಅಂಗವೆಂದು ಪರಿಗಣಿಸಲು ಪ್ರಸ್ತುತ ಅಧ್ಯಯನವು ಗಮನಹರಿಸಿದೆ.

• ಸರ್‍ರಿಯಲಿಸಂ ಪಂಥದ ಸಮಕಾಲೀನ ಸಂದರ್ಭದ ವಸ್ತುವಿಷಯ ವ್ಯಕ್ತಿಗಳ ಕುರಿತು ಅವರ ಓರೆ–ಕೋರೆಗಳನ್ನು ವಿಡಂಬನಾತ್ಮಕವಾಗಿ ಚಿತ್ರಿಸಿರುವುದರ ಮೂಲಕ ಅನೇಕ ಕಲಾವಿದರ ಬೆಳವಣಿಗೆಯನ್ನು ಗಮನಿಸಲಾಗಿದೆ.

• ಮೊದ ಮೊದಲು ನವ್ಯಕಲಾ ಪಂಥಗಳ ಹುಟ್ಟು ಹೇಗಾಯಿತು ಮತ್ತು ಯಾವ ಕಾರಣಕ್ಕೆ ಆಗಿದೆ ಎಂದು ಯಾರು ಇವುಗಳನ್ನು ಪ್ರತಿಪಾದಿಸಿದರು ಎಂಬುವುದನ್ನು ಇಲ್ಲಿ ತಿಳಿದು ಕೊಳ್ಳಲಾಯಿತು. ಈ ಪಂಥಗಳಲ್ಲಿ ಕಲಾಕೃತಿಗಳು ರಚನೆಗೊಂಡಿವೆ, ಈ ಪಂಥ ಪೋಷಕರು ಪಾಶ್ಚಾತ್ಯ ಕಲಾವಿದರು ಎಂಬುದು ಈ ಅಧ್ಯಯನದಿಂದ ಕಂಡುಬಂದ ಅಂಶವಾಗಿದೆ.

• ನವ್ಯಕಲಾ ಪಂಥದ ಪ್ರಭಾವ ಕರ್ನಾಟಕದ ಮೇಲೆ ಹೇಗೆ ಆಯಿತು. ಈ ಕಲೆಯ ಬೆಳವಣಿಗೆ ಕಲಾಕೃತಿಯಲ್ಲಿ ಬಳಸುವ ಪರಿಕರಗಳು, ವಸ್ತುವಿಷಯ ವರ್ಣಗಾರಿಕೆ ವಿಶಿಷ್ಟವಾಗಿದ್ದು, ಈ ಅಧ್ಯಯನದ ಮೂಲಕ ಅವು ಹೊರಜಗತ್ತಿಗೆ ಪರಿಚಯಗೊಳ್ಳುತ್ತಿವೆ.

• ಚಿತ್ರಕಲೆ ದೃಷ್ಟಿಯಿಂದ "ಸರ್‍ರಿಯಾಲಿಸಂ ಪಂಥ" ಎಂಬ ಹೊಸ ಚಿತ್ರಕಲಾ ಪ್ರಕಾರವೊಂದು ಕರ್ನಾಟಕದಲ್ಲಿ ಪ್ರಥಮ ಬಾರಿಗೆ ಕಂಡುಬಂದಿರುವುದು. ಈ ಕ್ಷೇತ್ರಕ್ಕಾದ ಒಂದು ದೊಡ್ಡ ಪ್ರಯೋಜನವೆಂದೆ ಹೇಳಬಹುದಾಗಿದೆ. ಪ್ರಮುಖ ಸರ್‍ರಿಯಾಲಿಸಂ ಪಂಥದ ಚಿತ್ರಗಳಲ್ಲಿರುವ ವೈವಿಧ್ಯತೆಗಳನ್ನು ವರ್ಗೀಕರಿಸಿ, ವ್ಯವಸ್ಥಿತವಾಗಿ ವಸ್ತುವಿಷಯದ ಬಗೆಗೆ ವಿಶ್ಲೇಷಣೆ ಮಾಡಲಾಗಿದೆ.

• ಸರ್‍ರಿಯಲಿಸಂ ಪಂಥ ಇತರ ಎಲ್ಲಾ ಪಂಥಗಳಂತೆ ಒಂದು ವಿಶಿಷ್ಟವಾದ ಶೈಲಿ. ಇಂದಿನ ಪರಿಸ್ಥಿತಿಯಲ್ಲಿ ಈ ಪಂಥ ಹೊಸ ಹೊಸ ಆಯಾಮಗಳಿಗೆ ತೆರೆದುಕೊಳ್ಳುವ, ವೈಜ್ಞಾನಿಕತೆಯನ್ನು ಅಳವಡಿಸಿಕೊಳ್ಳುವ ಕುರಿತು ಸಹ ಚರ್ಚಿಸಲಾಗಿದೆ.

• ಸರ್‍ರಿಯಲಿಸಂ ಪಂಥ ಬೆಳೆಯಬೇಕು ಆದರೆ ಅದರ ಜೊತೆ ಕಲಾವಿದರು ಬದುಕಿನಲ್ಲಿಯೂ ಬೆಳಕಿರಬೇಕು, ಅವರ ಬಾಳು ಹಸನಾಗಬೇಕು. ಅದಕ್ಕೆ ಇರುವ ಮಾರ್ಗವೆಂದರೆ ಸರ್‍ರಿಯಲಿಸಂ ಪಂಥ ಮುಂದುವರಿಸಿಕೊಂಡು ಹೋಗುವುದರ ಜೊತೆಗೆ ಜನರ ಬೇಡಿಕೆಯನ್ನು ಇಂದಿನ ಜೀವನಗತಿಗನುಗುಣವಾಗುವ ಅಗತ್ಯಗಳೇನು? ಮಾರುಕಟ್ಟೆಯ ಲಕ್ಷಣಗಳೇನು? ಕಲಾರಸಿಕರ ಪ್ರತಿಕ್ರಿಯೇನು? ಎನ್ನುವ ಪ್ರಶ್ನೆಗಳನ್ನು ಕಲಾವಿದರು ಅರ್ಥಮಾಡಿಕೊಂಡು ತಮ್ಮ ತಮ್ಮ ಕಲೆಯನ್ನು ರೂಡಿಸಿಕೊಂಡು ಹೋಗುವ ಕುರಿತು ಈ ಸಂಪ್ರಬಂಧ ಬೆಳಕು ಚಲ್ಲುತ್ತದೆ.

• ಸರ್ರಿಯಾಲಿಸಂ ಪಂಥದ ಕಲಾಕೃತಿಗಳು ನಮ್ಮ ಸಮಾಜದಲ್ಲಿ ನಡೆಯು ಘಟನೆಗಳನ್ನು ಒಳಗೊಂಡಿದ್ದು. ಈ ಕಲೆ ಯಾವುದೇ ಕಾರಣಕ್ಕು ಅವನತಿಯ ದಾರಿ ಹಿಡಿಯಬಾರದು. ಇದರ ಪೋಷಣೆ ಕೇವಲ ಕಲಾವಿದರದ್ದು, ಈ ಶೈಲಿಯ ಕಲಾವಿದರ ಜೀವನ ಮಟ್ಟ ಸುಧಾರಿಸಬೇಕು. ಅವರಿಗೆ ಸಮಾಜದಲ್ಲಿ ಗೌರವದ ಸ್ಥಾನ ಇನ್ನೂ ಲಭಿಸಬೇಕು. ನೂರಾರು ವರ್ಷಗಳಿಂದ ಉಳಿಸಿಕೊಂಡು ಬಂದಿರುವ ಈ ಸರ್ರಿಯಾಲಿಸಂ ಪಂಥದ ಅಂಶಗಳು ಮುಂದಿನ ಪೀಳಿಗೆಗೆ ಮುಂದುವರಿಯುವ ಅದರ ಸಾದಕ ಬಾದಕಗಳ ಕುರಿತು ಸಹ ಚರ್ಚಿಸಲಾಗಿದೆ.

• ದೃಶ್ಯಕಲಾ ಕ್ಷೇತ್ರದಲ್ಲಿ ಸರ್ರಿಯಾಲಿಸಂ ಪಂಥದ ಅರಿವಿನ ಅಗತ್ಯ ಹಾಗೂ ಮುಂದಿನ ದೃಶ್ಯಕಲಾ ಶಿಕ್ಷಣಕ್ಕೆ ಕಲಾ ಪಂಥಗಳ ಪರಿಚಯಿಸುವ ಮತ್ತು ಕಲಾ ವಿದ್ಯಾರ್ಥಿಗಳಿಗೆ, ವಿದ್ವಾಂಸರಿಗೆ, ಹಿರಿಯ, ಕಿರಿಯ ಕಲಾವಿದರಿಗೆ ಹಾಗೂ ಕಲಾ ಪೋಷಕರಿಗೆ, ಸಹೃದಯರಿಗೆ ತಿಳಿಸುವ ಹಾಗೂ ಕಲಾ ಇತಿಹಾಸದಲ್ಲಿ ಸರ್ರಿಯಾಲಿಸಂ ಪಂಥವನ್ನು ಇನ್ನೂ ಕಲಾವಿದರು ಉನ್ನತ ಸ್ಥಾನ ಕಲ್ಪಿಸುವ ಕುರಿತಾದ ಚರ್ಚೆ ನಡೆಸಲಾಗಿದೆ.

ಕೊನೆಯದಾಗಿ ಈ ಅಧ್ಯಯನದ ವ್ಯಾಪ್ತಿಗೆ ಪೂರಕವಾಗಿ "ಸರ್ರಿಯಾಲಿಸಂ ಪಂಥ" ದ ಕರ್ನಾಟಕದ ಕೆಲವು ಕಲಾವಿದರ ಕಲಾಕೃತಿಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ನೂರಾರು ಸರ್ರಿಯಲಿಸಂ ಪಂಥದ ಕಲಾಕೃತಿಗಳು ಈಗಲೂ ರಚಿಸುವ ಕಲಾವಿದರು. ಇದ್ದು ಅವರ ಕುರಿತಾಗಿ ಇನ್ನೂ ಸಮಗ್ರವಾಗಿ ಅಧ್ಯಯನ ಮಾಡಬೇಕಾದ ಅವಶ್ಯಕತೆಯಿದ್ದು, ಈ ಅಧ್ಯಯನ ಮುಂದಿನ ಅಧ್ಯಯನಕ್ಕೆ ಒಂದು ಸಣ್ಣ ಪ್ರಯತ್ನವಾಗಿದೆಯೆಂದು ಹೇಳಬಹುದು.

* * *

## ಗ್ರಂಥಋಣ


೧. **ಅನುಕ್ತ** – ರವಿಕುಮಾರ್ ಕಾಶಿ

(ದೃಶ್ಯಕಲೆಗಳ ಗ್ರಹಿಕೆ ಕುರಿತ ಲೇಖನ ಮಾಲೆ)

ಅಕ್ಷರ ಪ್ರಕಶನ ಹೆಗ್ಗೋಡು.

(ಸಾಗರ), ಕರ್ನಾಟಕ

೨. **ಕಲಾ ಸಂಸ್ಕೃತಿ** – ಎಂ.ಎಚ್. ಕೃಷ್ಣಯ್ಯ

ಸಪ್ನ ಬುಕ್ ಹೌಸ್

೩ನೇ ಮುಖ್ಯರಸ್ತೆ, ಗಾಂಧಿನಗರ

ಬೆಂಗಳೂರು – ೫೬೦೦೦೯ (೧೯೭೯)

೩. **ಕಲಾ ಪ್ರಪಂಚ.** – ಡಾ.ಶಿವರಾಮ ಕಾರಂತ

ಸಪ್ನ ಬುಕ್ ಹೌಸ್

೩ನೇ ಮುಖ್ಯರಸ್ತೆ, ಗಾಂಧಿನಗರ

ಬೆಂಗಳೂರು – ೫೬೦೦೦೯ (೧೯೭೯)

೪. **ಕಲೆಯ ಗೊಂಚಲ** – ಬಿ.ವಿ.ಕೆ.ಶಾಸ್ತ್ರಿ

ಕನ್ನಡ ಪುಸ್ತಕ ಪ್ರಾಧಿಕಾರ (೧೯೯೪)

೫. **ಕಲೆಗಾರರ ಕಥೆಗಳು** – ಬಿ.ಪಿ.ಬಾಯಿರಿ

ಸಮಾಜ ಪುಸ್ತಕ (೧೯೯೫)

೬. **ಕಣ್ಣೆಲೆ** – ರವಿಕುಮಾರ್ ಕಾಶಿ

(ದೃಶ್ಯಕಲೆ ಕುರಿತ ಬರಹಗಳು)

ಅಕ್ಷರ ಪ್ರಕಾಶನ ಹೆಗ್ಗೋಡು (ಸಾಗರ).

ಕರ್ನಾಟಕ

೭. **ಕಲಾ ಕೋಶ** – ಪಿ.ಆರ್.ತಿಪ್ಪೇಸ್ವಾಮಿ.

ಕರ್ನಾಟಕ ಲಲಿಕಲಾ ಅಕಾಡೆಮಿ

ನೃಪತುಂಗ ರಸ್ತೆ

ಬೆಂಗಳೂರು (೧೯೯೪).

೮. **ಕಲಾ ಸಂವೇದನೆಯ ಒಳನನೋಟಗಳು** – ಕೆ.ವಿ.ಸುಬ್ರಹ್ಮಣ್ಯಂ

ಕರ್ನಾಟಕ ಲಲಿತಕಲಾ ಅಕಾಡೆಮಿ

ನಂ ೧೪\೩, ಎರಡನೆಯ

ಮಹಡಿ ಕೆನರಾ ಫೈನಾನ್ಸ್

ಕಾರ್ಪೋರೆಷನ್ ಕಟ್ಟಡ

ನೃಪತುಂಬ ರಸ್ತೆ ಬೆಂಗಳೂರು. ೫೬೦೦೦೨.

೯. **ಕಲಾ ದಿಗ್ಗಜರು** – ಎನ್. ಮರಿಶಾಮಾಚರ್

ಸಿ.ಎ.ಎನ್, ಪ್ರಕಾಶನ

೮೮.೧ನೇ 'ಎ' ಕ್ರಾಸ್

೭ನೇ ಮೇನ್ ಎರಡನೇ ಬ್ಲಾಕ್,ಜಯನಗರ.

ಬೆಂಗಳೂರು. ೫೬೦೦೧೧ (೨೦೦೯)

೧೦. **ಕಲೆ ಮತ್ತು ರಸಸ್ವಾದನೆ.** – ಪ್ರೋ. ಎಂ.ಎಚ್.ಕೃಷ್ಣಯ್ಯ.

ಕರ್ನಾಟಕ ಲಲಿತಕಲಾ ಅಕಾಡೆಮಿ

ಬೆಂಗಳೂರು

೧೧. **ಚಿತ್ರಕಲಾ ಪ್ರಪಂಚ** – ಪಿ.ಆರ್.ತಿಪ್ಪೇಸ್ವಾಮಿ.

ಕರ್ನಾಟಕ ಲಲಿತಕಲಾ ಅಕಾಡೆಮಿ

ಕನ್ನಡ ಭವನ ಜೆ.ಸಿ.ರಸ್ತೆ.

ಬೆಂಗಳೂರು – ೫೬೦೦೦೨

೧೨. **ಚಿತ್ರಕಲಾ ಚಿಂತನೆ** – ಶಂಕರ್ ಪಾಟೀಲ್

ಪ್ರಗತಿ ಪ್ರಕಾಶನ

ಕಲಾಭವನ, ವಿದ್ಯಾನಗರ

ದಾವಣಗೆರೆ – ೫೭೭೦೦೫.

೧೩. **ದೃಶ್ಯಕಲಾ ಪ್ರಪಂಚ** – ಎನ್. ಮರಿಶಾಮಾಚಾರ್

ಸಿ.ಎಂ.ಎನ್, ಪ್ರಕಾಶನ

#೮೮.೮೧ನೇ 'ಎ' ಕ್ರಾಸ್

೨೭ನೇ ಮೇನ್, ೨ನೇ ಬ್ಲಾಕ್

ಜಯನಗರ, ಬೆಂಗಳೂರು. ೫೬೦೦೧೧.

೧೪. **ದೃಶ್ಯಾನುಭವ** – ಮೋಹನ್‌ರಾವ್ ಬಿ. ಪಂಚಾಳ
ಅನ್ನಪೂರ್ಣ ಪ್ರಕಾಶನ
ಬೀದರ್.

೧೫. **ದೃಶ್ಯ ಕಲಾವಿದರು**
ಪ್ರಸಾರಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೬. ನವ್ಯಕಲೆ ಹಾಗೂ ಕಲೆಗಾರರು – ಬಿ.ಪಿ.ಬಾಯಿರಿ
ಪ್ರತಿಭಾ ಗ್ರಂಥಮಾಲೆ,
ಧಾರವಾಡ (೧೯೯೦)

೧೭. ನೋಟ ಪಲ್ಲಟ – ಎಚ್.ಎ.ಅನೀಲ್‌ಕುಮಾರ್
(ದೃಶ್ಯಸಂಸ್ಕೃತಿ ಕುರಿತ ಲೇಖನಗಳು)
ಸಂಖ್ಯೆ ೪೧೪೮\ಎ.೩ನೆಯ
ಎರಡನೆಯ ಹಂತ
ಬೆಂಗಳೂರು ೨೧.

೧೮. **ನಿಜದ ನೆಲೆ** – ಡಾ. ಎಸ್.ಸಿ. ಪಾಟೀಲ ಮತ್ತು
(ಡಾ. ಬಿ.ಕೆ. ಹಿರೇಮಠ ಅಭಿನಂದನ ಗ್ರಂಥ) ಸತ್ಯಾನಂದ ಪಾತ್ರೋಟ
ವೈರಾಗ್ಯದ ಮಲ್ಲಣಾರ್ಯ ಪ್ರಕಾಶನ,
ಬಸವೇಶ್ವರ ವಿದ್ಯಾವರ್ಧಕ ಸಂಘ,
ಬಾಗಲಕೋಟ – ೨೦೦೩

೧೯. **ಪ್ರದರ್ಶನಾತ್ಮಕ ಜನಪದ ತೊಗಲುಗೊಂಬೆ ಚಿತ್ರಪಟ** – ಮೋಹನ್‌ರಾವ್ ಬಿ. ಪಂಚಾಳ
ಗಂಗೋತ್ರಿ ಪ್ರಕಾಶನ
ರಾಮಸಾಗರ (೨೦೧೮)

೨೦. ವರ್ಣ ಸಂಚಯ – ಡಾ. ಎಸ್. ಸಿ. ಪಾಟೀಲ
ಪ್ರಕಾಶನ : ವಿಜಯ ಚಿತ್ರಕಲಾ
ಮಹಾವಿದ್ಯಾಲಯ ಇಳಕಲ್ಲ

೨೧. **ವಜ್ರವಿಜಯ** – ಮೋಹನ್‌ರಾವ್ ಬಿ. ಪಂಚಾಳ
ನೆನಪಿನ ಸಂಚಿಕೆ
ವಿಜಯ ಕಲಾ ಮಂದಿರ, ವಜ್ರಮಹೋತ್ಸವ ಸಮಿತಿ

ಗದಗ

೨೨. **ಸರ್ರಿಯಲಿಸಂ** – ಎನ್.ಮರಿಶಾಮಾಚಾರ್
ಕರ್ನಾಟಕ ಲಲಿತಕಲಾ ಅಕಾಡೆಮಿ.
ಬೆಂಗಳೂರು (೧೯೯೫)

೨೩. **ಸರ್ರಿಯಸಂ ಪ್ರಮುಖ ಕಲಾವಿದರ** – ವಿರೇಶ್ ರುದ್ರಸ್ವಾಮಿ
ಕಲಾಕೃತಿಗಳ ಒಂದು ಅಧ್ಯಯನ
ಬೆಂಗಳೂರು ವಿಶ್ವವಿದ್ಯಾಲಯಕ್ಕೆ
ಸಲ್ಲಿಸಿದ ಕಿರು ಪ್ರಬಂಧ

೨೪. ಸಾಹಿತ್ಯ ಮತ್ತು ಚಿತ್ರಕಲೆ – ಚಂದ್ರಕಾಂತ ಕುಸುನೂರು
ಕಾಲ ಪ್ರಕಾಶನ
ಬೆಂಗಳೂರು.

**ಆಂಗ್ಲಭಾಷೆಯ ಪುಸ್ತಕಗಳು**

25. A History of modern Art - H.H. Arnason
26. Art And Visual Culture In India - Gayatri Sinha
27. Essential. - Robin Blake
28. Enjoying Modern Art - Sarch Newmeyer
29. World Art - Dr. Mike OMahony

**ಜಾಲತಾಣಗಳು**

೨೬. https://www.tate.org.uk
೨೭. https://study.com
೨೮. Surrealism - Wikipedia

**ಪತ್ರಿಕೆಗಳು**

೨೯. ಕಲಾವಾರ್ತೆ – ೭೪ನೇ ಸಂಚಿಕೆ – ೨೦೦೪. ಕರ್ನಾಟಕ ಲಲಿತಕಲಾ ಅಕಾಡೆಮಿ.
೩೦. ಪ್ರಜಾವಾಣಿ ದಿನಪತ್ರಿಕೆ ಸಾಪ್ತಾಹಿಕ ಪುರವಣಿ – ೧ ಏಪ್ರಿಲ್ ೨೦೧೨.
೩೧. ಮಯೂರ ಮಾಸಿಕ ಪತ್ರಿಕೆ – ಲೇಖನ – ರವಿಕುಮಾರ್ ಕಾಶಿ / ಏಪ್ರಿಲ್ ೨೦೦೯

## ಅನುಬಂಧ – ೧

**ಸಂಕ್ಷೇಪಗಳು**

| | | |
|---|---|---|
| ಕ.ವಿ.ವಿ.ಹಂ | : | ಕನ್ನಡ ವಿಶ್ವವಿದ್ಯಾಲಯ, ಹಂಪಿ |
| ಕ.ಲ.ಅ.ಬೆಂ | : | ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು |
| ಚಿ.ಪ.ಬೆಂ | : | ಚಿತ್ರಕಲಾ ಪರಿಷತ್ತು, ಬೆಂಗಳೂರು |
| ಪ್ರ.ಕ.ವಿ.ವಿ | : | ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ |
| ಪು | : | ಪುಸ್ತಕ |
| ಅ.ಪ್ರ | : | ಅಪ್ರಕಟಿತ |
| ಮ.ಪ್ರ | : | ಮಹಾಪ್ರಬಂಧ |
| ಸಂ | : | ಸಂಪಾದಕರು |
| ಪ್ರ.ಸಂ | : | ಪ್ರಧಾನ ಸಂಪಾದಕರು |
| ಲೇ | : | ಲೇಖಕರು |
| ಸಂ.ಪ್ರ | : | ಸಂಪ್ರಬಂಧ |
| ಕಿ.ಪ್ರ | : | ಕಿರುಪ್ರಬಂಧ |
| ಪು.ಸ | : | ಪುಟ ಸಂಖ್ಯೆ |

## ವಕ್ತೃಗಳ ವಿವರ

| ಕ್ರಸಂ | ಹೆಸರು | ವೃತ್ತಿ | ಊರು |
|---|---|---|---|
| ೧. | ಸಿ. ಚಂದ್ರಶೇಖರ್ | ಹಿರಿಯ ಕಲಾವಿದರು | ಬೆಂಗಳೂರು |
| ೨. | ಕಮಲಾಕ್ಷಿ ಎಂ.ಜೆ | ಹಿರಿಯ ಕಲಾವಿದರು | ಬೆಂಗಳೂರು |
| ೩. | ಜೆ.ಎಂ.ಎಸ್. ಮಣಿ | ಹಿರಿಯ ಕಲಾವಿದರು | ಬೆಂಗಳೂರು |
| ೪. | ರುದ್ರಗೌಡ ಇಚಿಡಿ | ಕಲಾವಿದರು | ಬೆಂಗಳೂರು |
| ೫. | ವೀರೇಶ್ ರುದ್ರಸ್ವಾಮಿ | ಕಲಾವಿದರು | ಬಾಗಲಕೋಟೆ |
| ೬. | ಸುರೇಖ | ಕಲಾವಿದೆ | ಬೆಂಗಳೂರು |
| ೭. | ಮನುಚಕ್ರವರ್ತಿ | ಕಲಾವಿದರು | ಬೆಂಗಳೂರು |
| ೮. | ವಾಸುದೇವ | ಕಲಾವಿದರು | ಬೆಂಗಳೂರು |
| ೯. | ಎಸ್.ಸಿ.ಪಾಟೀಲ್ | ಹಿರಿಯ ಕಲಾವಿದರು | ಧಾರವಾಡ |
| ೧೦. | ಚಂದ್ರಹಾಸ ಜಾಲಿಹಾಳ | ಕಲಾವಿದರು | ಕಲಬುರಗಿ |
| ೧೧. | ಮಲ್ಲಿಕಾರ್ಜುನ ಕನ್ನೂರ | ಕಲಾವಿದರು | ವಿಜಯಪುರ |
| ೧೨. | ಜಿ.ಎಸ್.ಭೂಸಗೊಂಡ | ಕಲಾವಿದರು | ವಿಜಯಪುರ |
| ೧೩. | ಕೆ.ಗಂಗಾಧರ | ಕಲಾವಿದರು | ಬಸವನಬಾಗೇವಾಡಿ |
| ೧೪. | ವಿ.ವಿ.ಹಿರೇಮಠ | ಶಿಕ್ಷಕರು ಹಾಗೂ ಕಲಾವಿದರು | ವಿಜಯಪುರ |
| ೧೫. | ನಿಂಗರಾಜ ಪಾಟೀಲ್ | ಕಲಾವಿದರು | ವಿಜಯಪುರ |
| ೧೬. | ಲಿಂಗರಾಜ ಕಚಾಪೂರ | ಕಲಾವಿದರು | ವಿಜಯಪುರ |
| ೧೭. | ನವೀನ್‌ಕುಮಾರ್ | ಕಲಾವಿದರು | ತುಮಕೂರು |
| ೧೮. | ನಂದಬಸಪ್ಪ ವಾಡೆ | ಕಲಾವಿದರು | ಬೆಂಗಳೂರು |
| ೨೦. | ಸುನಿಲ್ ಮಮದಾಪುರ | ಕಲಾವಿದರು | ವಿಜಯಪುರ |
| ೨೧. | ಚಂದ್ರನಾಥ್ ಆಚಾರ್ಯ | ಕಲಾವಿದರು | ಪುತ್ತೂರು |
| ೨೨. | ಪಿ.ಎಸ್.ಕಡೇಮನೆ | ಹಿರಿಯ ಕಲಾವಿದರು | ವಿಜಯಪುರ |